# ಹಾಸನ ಸಮೀಪದ ಚೌಡಳ್ಳಿಯಲ್ಲಿ ಭೀಕರ ಕೊಲೆ

(ವರದಿ : ನಮ್ಮ ಪ್ರತಿನಿಧಿಯಿಂದ)

ಕಳೆದ ಏಪ್ರಿಲ್ ತಿಂಗಳಿನಲ್ಲಿ ಹಾಸನದಿಂದ ಸುಮಾರು ಹನ್ನೆರಡು ಮೈಲಿ ದಕ್ಷಿಣಕ್ಕಿರುವ ಚೌಡಳ್ಳಿಯ ತಿಮ್ಮಯ್ಯ ಎಂಬ ಹರಿಜನ ಯುವಕನ ಕೊಲೆ ನಡೆದಿದೆ. ಅಲ್ಲದೆ ಐದಾರು ಜನರಿಗೆ ಅಮಾನುಷವಾಗಿ ಥಳಿಸಿದ್ದಾರೆ. ಇದೆಲ್ಲಾ ಮಾಜಿ ತಾ|| ಬೋ|| ಅಧ್ಯಕ್ಷ ಪುಟ್ಟರಾಜು ಎಂಬುವನ ನೇತೃತ್ವದಲ್ಲಿ ಸವರ್ಣೀಯರ ಗುಂಪು ನಡೆಸಿದೆ ಎಂದು ತಿಳಿದು ಬಂದಿದ್ದು ಈ ಘಟನೆ ಅಲ್ಲಿನ ಹರಿಜನರಲ್ಲಿ ಭೀತಿಯನ್ನುಂಟು ಮಾಡಿದೆ.

### ಹೊರಟ ಲಾರಿ ಹತ್ತಿದರು

ಹಾಸನ ಮತ್ತು ಇತರ ಸುತ್ತಲ ಹಳ್ಳಿಗಳಲ್ಲಿ ಕಮ್ಮಿ ಬೆಲೆಗೆ ಗೊಬ್ಬರ ತೆಗೆದುಕೊಂಡು ಸಕಲೇಶಪುರ ಮತ್ತಿತರ ಕಡೆಗೆ ಸಾಗಿಸಿ ಪ್ಲಾಂಟರ್ಸ್‌ಗಳಿಗೆ ಲಾಭಕ್ಕೆ ಮಾರುವ ಕೆಲಸ ನಡೆಯುತ್ತದೆ. ಇಂಥ ವ್ಯಾಪಾರ ಮಾಡುವ ಮಂದರದ ಮೇಸ್ತ್ರಿ ಅವತ್ತು ಭಾನುವಾರ 3. 4. 77 ರಂದು ಹಾಸನದ ಬಾಡಿಗೆ ಲಾರಿ ತೆಗೆದುಕೊಂಡು ಆಲೂರು ತಾಲೂಕಿನ ತಟ್ಟೆಕೆರೆಗೆ ಗೊಬ್ಬರ ತುಂಬಿಸಲು ಹೊರಟ. ಇದರ ಹಿಂದಿನ ಎರಡು ದಿನಗಳಿಂದಲೂ ಆತನೇ ಹೊಸಳ್ಳಿ ಮತ್ತು ಮಂದರದಿಂದ ಗೊಬ್ಬರ ತುಂಬಿಸಿದ್ದ. ಭಾನುವಾರ ರಾತ್ರಿ 9 ಗಂಟೆಯಲ್ಲಿ ಹೊಸಳ್ಳಿಯ

### ಕಳ್ಳತನದ ಗುಮಾನಿ ಬಂದು........

ಪುಟ್ಟರಾಜುವಿನ ಗೊಬ್ಬರದ ರಾಶಿಯಲ್ಲಿ ಎರಡು ಮೂರು ದಿನದ ಹಿಂದೆ ಕಳ್ಳತನದಿಂದ ಯಾರೋ ಗೊಬ್ಬರ ತುಂಬಿಕೊಂಡಿದ್ದು, ಕದ್ದು ಗೊಬ್ಬರ ತುಂಬಿರುವವರು ಇವರೇ ಎಂದು ಆ ದಿನ ಗೊಬ್ಬರ ಹೂಡಲು ಹೋಗುತ್ತಿದ್ದ ಲಾರಿಯನ್ನು ತಡೆದು ಪುಟ್ಟರಾಜು ಮತ್ತು ಅವನ ಕಡೆಯವರು ಅಲ್ಲಿದ್ದವರಿಗೆ ಹೊಡೆದದ್ದೆಂದು ಗೊತ್ತಾಗಿದ್ದು, ಕೊಲೆಯಾಗಿರುವ ತಿಮ್ಮಯ್ಯ ಅವತ್ತೇ ಮೊದಲ ದಿನ ಗೊಬ್ಬರ ಹೂಡುವ ಕೆಲಸಕ್ಕೆ ಹೋಗಿದ್ದನಂತೆ.

### ಊರೂರು ಹುಡುಕಾಟ

ಬೆಳಗಾಗುತ್ತಲೇ ಶೆಟ್ಟಿಹಳ್ಳಿಯಲ್ಲಿ ಲಾರಿ ತಡೆದು ಲಾರಿಯಲ್ಲಿದ್ದವರನ್ನು ಹೊಡೆದ ವಿಚಾರ ತಿಳಿದು ತಿಮ್ಮಯ್ಯನ ಅಣ್ಣಂದಿರಾದ ಎಲಕ್ಕಯ್ಯ ಮತ್ತು ಸಣ್ಣತಮ್ಮಯ್ಯ ಇಬ್ಬರೂ ತಮ್ಮ ತಿಮ್ಮಯ್ಯನನ್ನೂ ಮಗ ಸ್ವಾಮಿಯನ್ನೂ ಹುಡುಕಿಕೊಂಡು ಹೊರಟರು. ಸಂಜೆಯ ತನಕ ಸುತ್ತ ಮುತ್ತಲ ಹಳ್ಳಿಗಳಾದ ಬ್ಯಾಡರಹಳ್ಳಿ, ಪದುಮನಹಳ್ಳಿ, ಹೊಸಳ್ಳಿ (ಕೂಲಿಗೋಗಿದ್ದ ಹೊಸಹಳ್ಳಿಯ ನಾಲ್ಕು ಜನರೂ ಇನ್ನೂ ಊರು ಸೇರಿರಲಿಲ್ಲ) ಎಲ್ಲಾ ಕಡೆ ತಿರುಗಿ ಅವರು ಎಲ್ಲೂ ಸಿಗದೆ ಊರಿಗೇ ಹೋಗಿರಬಹುದೆಂದು ತಾವೂ ತಮ್ಮ ಊರಿನ ಕಡೆಗೇ ತಿರುಗಿದರು



ಸಂಪುಟ : ೨ ಬೆಲೆ : ೨೦ ಪೈಸೆ ೨೦-೫-೧೯೭೭ ಸಂಚಿಕೆ : ೩

**ನಮ್ಮ ಓದುಗರೆ,**

ಪಂಚಮ ಕಷ್ಟದಲ್ಲಿದೆ. ಚಂದಾ ಹಣ ಇನ್ನೂ ಕೊಡದಿರುವವರು ಮತ್ತು ಚಂದಾ ಅವಧಿ ಮುಗಿದಿರುವವರು ಬೇಗ ತಮ್ಮ ಚಂದಾ ಹಣವನ್ನ ಎಂ. ಓ. ಮೂಲಕ ಕಳುಹಿಸಿ ಸಹಕರಿಸಿ.

—ಸಂಪಾದಕ

ನಾಲ್ಕು ಜನ ಕೂಲಿಯಾಳುಗಳನ್ನು ಕರೆದುಕೊಂಡು ಗೊಬ್ಬರ ತುಂಬಲು ಹೊರಟವನು ಇವರಿಷ್ಟೇ ಜನ ಸಾಲರು ಅನ್ನಿಸಿ ಆ ಆಳುಗಳಿಗೆ ಇನ್ನೊಂದು ಮೂರು ನಾಲ್ಕು ಜನ ಆಳುಗಳನ್ನು ಕರೆದುಕೊಳ್ಳಿ ಎನ್ನಲು ಅವರು, ತಾವು ಗೊಬ್ಬರ ತುಂಬಲು ಹೋಗುತ್ತಿದ್ದ ಮಾರ್ಗದಲ್ಲೇ ಒಂದು ಮೈಲಿ ದೂರವಿರುವ ಚೌಡಳ್ಳಿಗೆ ಬಂದು ಕೆಲಸಕ್ಕೆ ಕರೆದಾಗ ಕೊಲೆಯಾದ ತಿಮ್ಮಯ್ಯ, ಆತನ ಅಣ್ಣನ ಮಗ ಸ್ವಾಮಿ ಮತ್ತು ಸಣ್ಣಯ್ಯ ಎಂಬುವರೂ ಗೊಬ್ಬರ ಹೂಡಲು ಹೊರಟ ಲಾರಿ ಹತ್ತಿದರು.

### ಕತ್ತಲಲ್ಲಿ ದಂಡು ಬಂತು

ಚೌಡಳ್ಳಿಯಿಂದ ಹೊಸ ಆಳುಗಳನ್ನು ಕರೆದುಕೊಂಡು ಹೊರಟ ಲಾರಿಯನ್ನು ಚೌಡಳ್ಳಿಯಿಂದ ಅರ್ಧ ಮೈಲು ಇರುವ ಶೆಟ್ಟಳ್ಳಿಯ ಹತ್ತಿರಕ್ಕೈಯಲ್ಲಿ ದೊಣ್ಣೆಗಳನ್ನು ಹಿಡಿದಿರುವ ಹತ್ತಿಪ್ಪತ್ತು ಜನರ ಗುಂಪು ತಡೆದು ನಿಲ್ಲಿಸಿತು. ಲಾರಿಯ ಡ್ರೈವರ್ ಮತ್ತು ಅಲ್ಲಿದ್ದವರು ಇದನ್ನು ಕಂಡು ದಿಗ್ಭ್ರಮೆಗೊಂಡ ಕ್ಷಣದಲ್ಲೇ ಆ ಗುಂಪು ಲಾರಿಯಲ್ಲಿದ್ದವರನ್ನೆಲ್ಲಾ ಮುತ್ತಿಕೊಂಡು ಸಿಕ್ಕಸಿಕ್ಕಲ್ಲಿ ದೊಣ್ಣೆಗಳಿಂದ ಬಡಿಯ ತೊಡಗಿದರು. ಏಟು ತಡೆಯಲಾರದೆ ಪ್ರಾಣಭಯದಿಂದ ಕೂಲಿಗೆ ಬಂದಿದ್ದ ಆಳುಗಳೆಲ್ಲಾ ಹೇಗೇಗೋ ಅವರಿಂದ ತಪ್ಪಿಸಿಕೊಂಡು ಮನಬಂದತ್ತ ಕತ್ತಲಲ್ಲೇ ಓಡಿ ತಪ್ಪಿಸಿಕೊಂಡರು. ಲಾರಿ ತಡೆದು ಹೊಡೆತಕೊಟ್ಟ ಗುಂಪಿನಲ್ಲಿ ಸವರ್ಣೀಯರಾದ ಮಾಜಿ ತಾ|| ಬೋ|| ಅಧ್ಯಕ್ಷ ಪುಟ್ಟರಾಜು, ಓಯಣ್ಣ, ಸ್ವಾಮಿ, ಜಯಣ್ಣ, ಚಂದ್ರ, ಮಾಲಿಂಗ ಇನ್ನೂ ಮುಂತಾದ ಹತ್ತಿಪ್ಪತ್ತು ಜನರಿದ್ದರೆಂದು ಗೊತ್ತಾಗಿದೆ.

ಅಷ್ಟೊತ್ತಿಗಾಗಲೇ ಕತ್ತಲಾಗಿತ್ತು. ಊರ ಹತ್ತಿರಕ್ಕೆ ಬಂದಾಗ ತಮ್ಮ ಮನೆಯಿಂದ ಹಿತ್ತಲು ಕಡೆಗೆ ಅರ್ಧ ಫರ್ಲಾಂಗು ದೂರದಲ್ಲಿರುವ ಗೇರು ಮರದ ಬುಡದಲ್ಲಿ ಏಳೆಂಟು ಜನರ ಗುಂಪು ನಿಂತಿದ್ದುದನ್ನು ಕಂಡರು. ಅದೇನು ನೋಡೋಣವೆಂದು ಆ ಕಡೆ ಹೋಗುತ್ತಿದ್ದಾಗ ಗುಂಪಿಗೆ ನಿಂತಿದ್ದ ಜನರು ಇವರನ್ನು ಕಂಡದ್ದೇ ಓಡಿಹೋದರು. ಇಬ್ಬರೂ ಗೇರುಮರದ ಬುಡದತ್ತ ಗಮನಿಸಿ ಏನೋ ಬಿದ್ದಿರುವಂತೆ ಕಂಡು ಹತ್ತಿರ ಹೋಗಿ ನೋಡಿದಾಗ ತಮ್ಮನ ಹೆಣ ಕಂಡು ಕೂಗಿಕೊಂಡರೆಂದೂ- ಈ ಕೂಗಾಟ ಕೇಳಿ ಊರ ಜನ ಸೇರಿದರೆಂದೂ ಗೊತ್ತಾಗಿದೆ.

### ಮದುಮಗನ ಮೆರವಣಿಗೆ ಮಸಣದ ಕಡೆಗೆ

ಕೊಲೆಯಾದ ತಿಮ್ಮಯ್ಯನ ಮದುವೆ ಆದಾಗಲೇ ನಿಶ್ಚಯವಾಗಿದ್ದು 5. 4. 77ರಂದು ಲಗ್ನಪತ್ರಿಕೆ ಅಚ್ಚು ಹಾಕಿಸಲು ಹೋಗಬೇಕಿತ್ತು. ತಿಮ್ಮಯ್ಯನ ಮನೆಯವರು ಸಡಗರದಿಂದ ಆತನ ಮದುವೆ ಮಾಡಲು ತಯಾರಿ ನಡೆಸುತ್ತಿದ್ದವರಿಗೆ ಇದ್ದಕ್ಕಿದ್ದಂತೆ ಅವನ ಕೊಲೆ ನಡೆದದ್ದು ಕಂಡು ದುಃಖಿತರಾಗಿದ್ದಾರೆ. ಹೆಣ ನೋಡಿದಾಗ —ಕೈಕಾಲಿಗೆಲ್ಲಾ ಏಟಾಗಿ ತೊಡೆ ಸೊಂಟದಲೆಲ್ಲಾ ರಕ್ತ ಮೆತ್ತಿದ್ದು, ಕತ್ತಿನ ಮುಂಬಾಗದಲ್ಲಿ 3-4 ಇಂಚು ಕೊರೆದ ಗಾಯ ಆಗಿತ್ತೆಂದೂ ಇದನ್ನು ಕಂಡ ಯಾರೇ ಆಗಲಿ ಇದು ಕೊಲೆಯೆ ಎಂದು ನಿರ್ಧರಿಸುವಂತೆ ಹೆಣ ಇತ್ತೆಂದು ಗೊತ್ತಾಗಿದೆ.

(ಕೊನೆಯ ಪುಟಕ್ಕೆ)

# ಶೋಷಣೆಗೆ ಸಿಕ್ಕ ಪೌರ ಕಾರ್ಮಿಕರು

## ಅಳಲು

ಮಾನ್ಯರೆ,

ಪೌರಕಾರ್ಮಿಕರೆಂದು ಕರೆಸಿಕೊಳ್ಳುವ ಅತೀ ಕೀಳು ವರ್ಜಿಯ ಜನರಾದ ಜಾಡಮಾಲಿ, ಜಲಗಾರ ಜನಾಂಗಕ್ಕೆ ಸರ್ಕಾರ ಮೈಸೂರು ನಗರದಲ್ಲಿ ಕೆಲವುಕಡೆ ಕ್ವಾರ್ಟರ್ಸ್‌ಗಳನ್ನು ಕಟ್ಟಿಸಿಕೊಟ್ಟಿದೆ. ಈ ಕ್ವಾರ್ಟರ್ಸ್‌ಗಳು ಹಂದಿಗೂಡುಗಳಂತಿದ್ದು ಸಮಾಜ ಅವರನ್ನು ನೋಡುವ ಕೀಳು ದೃಷ್ಟಿಗೂ ಸರ್ಕಾರ ಅವರನ್ನು ನೋಡುವ ದೃಷ್ಟಿಗೂ ವ್ಯತ್ಯಾಸವಿಲ್ಲವೆಂಬಂತಿವೆ. ಅಂತಹ ಅಸಹ್ಯ ಹುಟ್ಟಿಸುವ ಗೂಡುಗಳಲ್ಲಿ ಬಡತನ, ದುಃಖ, ಅವಮಾನಗಳನ್ನು ಬೆನ್ನಿಗೆ ಕಟ್ಟಿಕೊಂಡೇ ಬದುಕುತ್ತಿರುವ ಇವರು ದಿನವೆಲ್ಲ ದುಡಿದರೂ ತಮ್ಮ ಮೇಲಿನ ಅಧಿಕಾರಿಗಳಾದ ಹೆಲ್ತ್ ಇನ್‌ಸ್ಪೆಕ್ಟರುಗಳು ಮಾಡುವ ಅನ್ಯಾಯಗಳಿಂದಾಗಿ ಬರುವ ಸಂಬಳವೂ ಸರಿಯಾಗಿ ಕೈಗೆ ಸಿಗದೆ ತೊಂದರೆ ಪಡುತ್ತಿದ್ದು, ಆಗುತ್ತಿರುವ ಅನ್ಯಾಯಗಳ ಬಗ್ಗೆ ಪ್ರತಿಭಟಿಸಿದರೆ ತಮಗೇ ಅದು ತಿರುಗಿ ಮತ್ತೂ ಅನ್ಯಾಯವಾಗುವುದರಿಂದ ಅಸಹಾಯಕರಾಗಿದ್ದಾರೆ.

ಅಂತ ಕೆಲವು ಅನ್ಯಾಯಗಳು ಈ ಕೆಳಗಿನಂತಿವೆ.

1. ಹೆಲ್ತ್ ಇನ್‌ಸ್ಪೆಕ್ಟರುಗಳ ಕೈ ಕೆಳಗೆ ದುಡಿಯುವ ಇವರು ಪ್ರತಿ ತಿಂಗಳ ಸಂಬಳದಲ್ಲೂ ತಮ್ಮ ಮೇಲಿನ ಇನ್ಸ್‌ಪೆಕ್ಟರುಗಳಿಗೆ ತಲಾ 30–50 ರೂಗಳವರೆಗೆ ಲಂಚ ಕೊಡಬೇಕಾಗಿದೆ. ಕೊಡದೆ ಪ್ರತಿಭಟಿಸಿದರೆ ಅಂತಹ ಪ್ರತಿಭಟಿಸಿದ ವ್ಯಕ್ತಿಗಳಿಗೆ ಮರುದಿನದಿಂದಲೇ ಕೆಲಸಕ್ಕೆ ಹಾಜರಾಗಿದ್ದರೂ ಗೈರು ಹಾಜರಿ ಹಾಕುವುದು. ಕೆಲಸದಿಂದ ಸಸ್ಪೆನ್‌ಸನ್‌ನಲ್ಲಿಡುವುದು ನಡೆಯುತ್ತಿದೆ. ಮತ್ತು ಸಂಬಳದ ದಿನ ಸಂಬಳ ಕೊಡಬೇಕಾಗಿರುವುದು ಮುನಿಸಿಪಲ್ ಆಫೀಸಿನಲ್ಲಿ. ಆದರೆ ಈ ಇನ್ಸ್‌ಪೆಕ್ಟರುಗಳು ತಮ್ಮ ತಮ್ಮ ಮೊಹಲ್ಲಾಗಳಿಗೇ ಹಣ ತಂದು ಸಂಬಳ ಕೊಡುತ್ತಾರೆ. ಸಂಬಳ ಕೊಡುವಾಗಲೇ 10–20 ರೂಗಳನ್ನು ಹಿಡಿದುಕೊಳ್ಳುವುದಲ್ಲದೇ ಸಂಬಳ ಕೊಟ್ಟಮೇಲೂ ತಿಂಗಳ ಮಾಮೂಲಿ ಲಂಚ ತೆಗೆದುಕೊಳ್ಳುವರು.

2. ಪೌರ ಕಾರ್ಮಿಕರಿಗೆ ಕೆಲವು ಸೌಲಭ್ಯಗಳಿದ್ದು, ಅವುಗಳೆಂದರೆ ಒಬ್ಬರಿಗೆ ವರ್ಷಕ್ಕೆ ಎರಡು ಜೊತೆ ಸಮವಸ್ತ್ರ ತಿಂಗಳಿಗೆ ಎರಡು ಬಾರ್ ಸೋಪು, ವರ್ಷಕ್ಕೆ ಎರಡು ಜೊತೆ ಚಪ್ಪಲಿಗಳನ್ನು ಕೊಡುವ ಏರ್ಪಾಡಿದೆ. ಇವನ್ನೆಲ್ಲ ಹಂಚುವವರು ಹೆಲ್ತ್ ಇನ್ಸ್‌ಪೆಕ್ಟರ್‌ಗಳೇ. ಇವರು ಹಂಚುವಾಗ ಕೆಲವರಿಗೆ ಸಮವಸ್ತ್ರ ಚಪ್ಪಲಿ ಕೊಟ್ಟರೆ ಸೋಪು ಕೊಡುವುದಿಲ್ಲ. ಸೋಪು, ಸಮವಸ್ತ್ರ ಕೊಟ್ಟರೆ ಚಪ್ಪಲಿ ಕೊಡುವುದಿಲ್ಲ. ಪೌರ ಕಾರ್ಮಿಕರು ಇದನ್ನೆಲ್ಲಾ ಕೇಳುವ ಧೈರ್ಯವಿಲ್ಲದೆ ಸಹಿ ಮಾತ್ರ ... ವನ್ನೂ ತೆಗೆದುಕೊಂಡಿದ್ದೇವೆ ಎಂದು ಮಾಡುವರು.

3. ಪೌರ ಕಾರ್ಮಿಕರಿಗೆ ವರ್ಷಕ್ಕೆ ಒಂದು ತಿಂಗಳ ಕ್ಯಾಸುಯಲ್ ರಜದ ಸೌಲಭ್ಯವಿದೆ. ಆ ರಜವನ್ನು ಎಷ್ಟುದಿನ ಪಡೆಯುವರೋ ಅಷ್ಟು ದಿನದ ರಜ ಪಡೆಯಲು ಪ್ರತಿದಿನದ ರಜಕ್ಕೂ ದಿನವೊಂದಕ್ಕೆ ಎರಡು ರೂಗಳಂತೆ ಹೆಲ್ತ್ ಇನ್ಸ್‌ಪೆಕ್ಟರಿಗೆ ಸಂಭಾವನೆಯಾಗಿ ಕೊಡಬೇಕಾಗುವುದು. ಸಂಭಾವನೆ ಕೊಡಲು ಒಪ್ಪದಿದ್ದಲ್ಲಿ ರಜವನ್ನು ಮಂಜೂರು ಮಾಡಿಸಿಕೊಡುವುದಿಲ್ಲ.

ಇವೆಲ್ಲ ಅನ್ಯಾಯಗಳ ಬಗ್ಗೆ ಕ್ರಮ ತೆಗೆದುಕೊಳ್ಳಲು ಸಂಬಂಧಪಟ್ಟ ಮುನಿಸಿಪಲ್ ಅಧಿಕಾರಿಗಳಿಗೆ ದೂರು ಕೊಟ್ಟರೂ ಪ್ರಯೋಜನವಾಗಿಲ್ಲ. ಸರ್ಕಾರ ದಿನವೂ ಆಕಾಶವಾಣಿ ಪತ್ರಿಕೆಗಳಲ್ಲಿ ಬಡವರ ಉದ್ಧಾರದ ಬಗ್ಗೆ ಮಾತನಾಡುವುದನ್ನು ಕಂಡಾಗ ಇವರೆಲ್ಲಾ ಯಾವ ಬಡವರ ಬಗ್ಗೆ ಚಿಂತಿಸುತ್ತಿದ್ದಾರೆ ಅನಿಸುತ್ತದೆ!

— ಆಂಜನೇಯ, ಎಸ್. ಸುರೇಶ್
ಗಾಂಧಿನಗರ, ಮೈಸೂರು

# ಪ್ರತಿಕ್ರಿಯೆ

## ಜೊಲ್ಲು ಸುರಿಸುವ ಧುರೀಣರು

ಕಳೆದ ಪಂಚಮ ಸಂಚಿಕೆಯಲ್ಲಿ 'ಸಮಾಜ ಕಲ್ಯಾಣ ಇನ್ಸ್‌ಪೆಕ್ಟರ್‌ನಿಂದಲೇ ಹರಿಜನ ವಿಧ್ಯಾರ್ಥಿನಿಯ ಮಾನಭಂಗ ಯತ್ನ' ಓದಿದ ಯಾರಿಗಾದರೂ ಗೊತ್ತಾಗುತ್ತದೆ: ಸಮಾಜ ಕಲ್ಯಾಣ ಇಲಾಖೆ ಯಾವರೀತಿ ಹಿಂದುಳಿದವರಿಗಾಗಿ ದುಡಿಯುತ್ತಿದೆ' ಎಂದು. ಹಿಂದುಳಿದವರ ಬಗ್ಗೆ ದೊಡ್ಡದಾಗಿ ಮಾತಾಡುವ ಮತ್ತು ಇವರ ಓಟಿಗಾಗಿ ಜೊಲ್ಲು ಸುರಿಸುತ್ತಾ ಕಾಯುವ ರಾಜಕೀಯ ದುರೀಣರುಗಳೇಕೆ ಇಂಥ ಘಟನೆಗಳ ಬಗ್ಗೆ ಕಣ್ಣು ಮುಚ್ಚಿ ಕೊಳ್ಳುತ್ತಾರೆ.

— ಮಹದೇವಮ್ಮ
ಮೈಸೂರು

## ಇದು ಎಂಥ ವ್ಯವಸ್ಥೆ ?

ಕೇಂದ್ರದಲ್ಲಿ ಜನತಾ ಪಕ್ಷ ಅಧಿಕಾರಕ್ಕೆ ಬಂದ ಮೇಲಿನ ವಿದ್ಯಮಾನಗಳನ್ನು ನೋಡಿ ನನಗೆ ಒಂದು ರೀತಿಯ ಆಶ್ಚರ್ಯದ ಜೊತೆಗೆ ಭಯ ಉಂಟಾಗಿದೆ. ಅದೆಂದರೆ ಯಾವ್ಯಾವುದೋ ಅನ್ಯಾಯಗಳನ್ನು ತನಿಖೆ ಮಾಡಲು ಆಯೋಗಗಳನ್ನು ನೇಮಿಸಲಾಗುತ್ತಿದೆ. ಸಂತೋಷ. ಆದರೆ ಎಮರ್ಜನ್ಸಿಗೆ ಮೊದಲು, ಎಮರ್ಜನ್ಸಿಯಲ್ಲಿ, ಎಮರ್ಜನ್ಸಿಯ ನಂತರ ಈಗಲೂ ಅಧಿಕಾರಿಶಾಹಿ ಬಂಡವಾಳಶಾಹಿ ಕೈ ಕೆಳಗೆ ದಲಿತರ ಕೊಲೆಯಾಗಿ (ಇಂತವುಗಳನ್ನು 'ಪಂಚಮ' ಬಹಳಷ್ಟು ವರದಿ ಮಾಡಿದೆ.) ಮರೆಸಿಹೋಗುತ್ತಿರುವ ಘಟನೆಗಳ ಬಗ್ಗೆ ಆಯೋಗಗಳು ಬೇಡ, 'ಇದು ಅನ್ಯಾಯ' ಎನ್ನುವ ಮಾತುಗಳೂ ಕೇಳಿಸುತ್ತಿಲ್ಲವಲ್ಲ ಏಕೆ? ಇದು ಎಂತ ವ್ಯವಸ್ಥೆ ?

— ಹೆಚ್. ಡಿ. ಅಮರನಾಥನ್, ಬೆಂಗಳೂರು

## ಪಕ್ಷ ರಾಜಕೀಯ ಬೇಡ

ಮೊದಲಿನಿಂದಲೂ ಪಂಚಮ ಕಟುವಾಗಿ ಟೀಕಿಸುತ್ತಿದ್ದ ಕಾಂಗ್ರೆಸ್ ಸರ್ಕಾರ ಈಗ ಉರುಳಿ ಬಿದ್ದಿದೆ. ಆದರೆ ಅಧಿಕಾರಕ್ಕೆ ಬಂದಿರುವ ಜನತಾ ಪಕ್ಷ ಕೂಡ ದಲಿತರ ನೋವಿನ ಬಗ್ಗೆ ಕಾಳಜಿ ಉಳ್ಳದ್ದಲ್ಲ ಎನ್ನುವುದು ಇತ್ತೀಚೆಗೆ ಗೊತ್ತಾಗುತ್ತಿದೆ. ಇದು ಏಕೆಂದರೆ ಕಾಂಗ್ರೆಸ್ಸಿನಲ್ಲಿ ರಾಜಕೀಯ ಮಾಡುವಂತಹವರೇ ಜನತಾದಲ್ಲೂ ರಾಜಕೀಯ ಮಾಡತೊಡಗಿದ್ದಾರೆ. ಆದ್ದರಿಂದ ಪಕ್ಷ ರಾಜಕೀಯ ಮರೆತು ದಲಿತರ ನಿಜವಾದ ವೈರಿಗಳಾದ ಪೋಲ್ಜಾತಿ ಮೇಲ್ವರ್ಗದ ಬಗ್ಗೆ ದಲಿತರಲ್ಲಿ ಪ್ರಜ್ಞೆ ಮೂಡಿಸುವ ಕೆಲಸವನ್ನು ಪಂಚಮ ಇನ್ನು ಮುಂದೆ ಮಾಡುತ್ತದೆ ಎಂದುಕೊಂಡಿದ್ದೇನೆ.

— ರಂಗಸ್ವಾಮಿ
ಬೆಂಗಳೂರು

### ಭೂಮಿ ಕಿತ್ತುಕೊಳ್ಳಲು

# ಹೆಗ್ಗೂರು ಹರಿಜನರ ಮೇಲೆ ಜಮೀನ್ದಾರನ ಸತತ ಹಲ್ಲೆ

ಈ ಬಾರಿಯ ಲೋಕಸಭಾ ಚುನಾವಣೆಯ ನಂತರ "ಕಾನೂನುಗಳು ವಾಪಸ್ಸು" ಎನ್ನುವ ತಪ್ಪು ಕಲ್ಪನೆಗಳಿಂದಾಗಿ ಹಳ್ಳಿಗಳಲ್ಲಿ ಹರಿಜನ ಗಿರಿಜನ ಇತ್ಯಾದಿ ಹಿಂದುಳಿದವರ ಮೇಲೆ ನಡೆಯುತ್ತಿರುವ ದೌರ್ಜನ್ಯಗಳು ಇನ್ನೂ ನಿಂತಿಲ್ಲ. ಇತ್ತೀಚೆಗೆ ಮೈಸೂರು ಜಿಲ್ಲೆಯ ಹೆಗ್ಗೂರು ಗ್ರಾಮದಲ್ಲಿ ಇಂತದೇ ಒಂದು ದೌರ್ಜನ್ಯದ ಘಟನೆ ನಡೆದಿರುವುದು ವರದಿಯಾಗಿದ್ದು, ಏಪ್ರಿಲ್ 18, 19 ಮತ್ತು 28ರಂದು ಹೆಗ್ಗೂರು ಪಕ್ಕದ ಕಟ್ಟೆಕೊಪ್ಪಲು ಗ್ರಾಮದ ಒಕ್ಕಲಿಗ ಜಾತಿಯ ಬುರುಗಿ ತಿಬ್ಬೆಗೌಡ ಎನ್ನುವ ಜಮೀನುದಾರ ತನ್ನದೇ ಜಾತಿಯ ಇತರ ಜಮೀನ್ದಾರರ ಬೆಂಬಲದಿಂದ ಹೆಗ್ಗೂರಿನ ಹರಿಜನರ ಮೇಲೆ ಸತತವಾಗಿ ಹಲ್ಲೆ ನಡೆಸಿರುವುದರಿಂದ ಹರಿಜನರು ಭಯಭೀತಿಗೊಳಗಾಗಿದ್ದಾರೆಂದು ಗೊತ್ತಾಗಿದೆ.

### ಬರಿ ಬಡ್ಡಿಗೆ ಜಮೀನು ಬೆಳೆದ

ಬುರುಗಿ ತಿಬ್ಬೆಗೌಡ ಹೆಗ್ಗೂರಿನ ಹತ್ತನ್ನೆರಡು ಜನ ಹರಿಜನರಿಗೆ ಸಾಲಕೊಟ್ಟು ಸುಮಾರು ವರ್ಷಗಳಿಂದ ಅವರ ಇನಾಮತಿ ಜಮೀನುಗಳನ್ನು ಬರಿಯ ಬಡ್ಡಿಗಷ್ಟೇ ಬೆಳೆಯುತ್ತಾ ಬರುತ್ತಿದ್ದ. ಈ ಮಧ್ಯೆ 1975ರಲ್ಲಿ ಋಣ ವಿಮೋಚನಾ ಕಾನೂನು ಬಂದುದರಿಂದ ಜಮೀನುಗಳು ಪುನಃ ಹರಿಜನರ ಕೈಸೇರಿದವು. ಆದರೆ ಈ ವರ್ಷದ ಲೋಕಸಭಾ ಚುನಾವಣೆಯಲ್ಲಿ ಜನತಾಪಕ್ಷ ಅಧಿಕಾರಕ್ಕೆ ಬಂದ ಮೇಲೆ 'ಕಾನೂನುಗಳು ವಾಪಸ್ಸಾದುವು' ಎಂದುಕೊಂಡ ಬುರುಗಿ ತಿಬ್ಬೆಗೌಡ ಮತ್ತು ಇತರ ಜಮೀನ್ದಾರರುಗಳು ಹರಿಜನರನ್ನು ಹೆದರಿಸಿ ಕಿರುಕುಳ ಕೊಟ್ಟು ಕೈಬಿಟ್ಟ ಜಮೀನುಗಳನ್ನು ಕಿತ್ತುಕೊಳ್ಳಲು ನೋಡಿದರು. ಇದು ಈ ಹಲ್ಲೆಗೆ ಮುಖ್ಯ ಕಾರಣವಾಗಿದೆ.

### ಹಲ್ಲೆಯ ಮೊದಲ ದಿನ

ಬುರುಗಿ ತಿಬ್ಬೆಗೌಡನಿಗೆ ಜಮೀನು ಭೋಗ್ಯ ಮಾಡಿದ್ದು, ಋಣ ವಿಮೋಚನಾ ಕಾನೂನಿನ ಪ್ರಕಾರ ಜಮೀನನ್ನು ವಾಪಸ್ಸು ಪಡೆದಿದ್ದವರಲ್ಲಿ ಹೆಗ್ಗೂರಿನ ರಂಗಯ್ಯನೂ ಒಬ್ಬ. ಆದರೆ ತಾ|| 18-4-77 ರಂದು ತನ್ನ ಜಮೀನಿನಲ್ಲಿ ಬುರುಗಿ ತಿಬ್ಬೆಗೌಡನ ಹೇರುಗಳು ಉಳುತ್ತಿದ್ದುದನ್ನು ಕಂಡು ಆಶ್ಚರ್ಯಗೊಂಡ ಹೆಗ್ಗೂರಿನ ರಂಗಯ್ಯ ಅವನ ಹೆಂಡತಿ, ಮಗ ಮತ್ತು ಅಳಿಯ ಎಲ್ಲರೂ ಓಡಿಹೋಗಿ ಉಳುವುದನ್ನು ನಿಲ್ಲಿಸುವಂತೆ ತಡೆದರು. ಬುರುಗಿತಿಬ್ಬೆಗೌಡ "ನನ್ನ 200ರೂ ಸಾಲದ ಹಣ ಮಡಗ್ ಬುಡಿ, ಇಲ್ದಿದ್ರೆ ನಿಮ್ಮ ತರ್ದಾ ಕ್ಬುಡ್ತಿನಿ" ಎಂದು ಗದರಿಸಿದ. ಇದೇ ಸಮಯಕ್ಕೆ ಅಲ್ಲಿಗೆ ಬಂದ ಹೆಗ್ಗೂರಿನ ಯ|| ನಿಂಗಯ್ಯ ಮತ್ತು ಕಾಳಯ್ಯ ಇದೇನೆಂದು ಕೇಳಲಾಗಿ ತಿಬ್ಬೆಗೌಡನ ಕಡೆಯವರು ನಿನಗ್ಯಾಕಲೆ ಇದೆಲ್ಲ, ಎಂದು ನಿಂಗಯ್ಯನನ್ನು ಅಮಾನುಷವಾಗಿ ಥಳಿಸಿದರು ಎಂದು ಗೊತ್ತಾಗಿದೆ.

### ಗಾಡಿಯಲ್ಲಿ ದೊಣ್ಣೆ ಮಚ್ಚು ಕೊಡ್ಲಿ

ಬುರುಗಿ ತಿಬ್ಬೇಗೌಡನಿಗೆ ಜಮೀನು ಬೋಗ್ಯ ಮಾಡಿದ್ದವರಲ್ಲಿ ಹೆಗ್ಗೂರಿನ ಯ||ಕಾಳಯ್ಯನೂ ಒಬ್ಬ. ನಿಂಗಯ್ಯನಿಗೆ ಹೊಡೆತ ಬಿದ್ದ ಮಾರನೆ ದಿನ ತಾರೀಖು 19-4-77 ರಂದು ತಿಬ್ಬೇಗೌಡನ ಹೇರುಗಳು ತನ್ನ ಜಮೀನನ್ನೂ ಉಳುತ್ತಿದ್ದುದನ್ನು ನೋಡಿ ಓಡೋಡಿ ಬಂದ ಕಾಳಯ್ಯ ಉಳಬೇಡಿ ಎಂದು ಹೇರುಗಳನ್ನು ತಡೆದ. ಆದರೆ ಎಲ್ಲದಕ್ಕೂ ರೆಡಿಯಾಗಿ ಗಾಡಿಯಲ್ಲಿ ದೊಣ್ಣೆ ಮಚ್ಚು ಕೊಡ್ಲಿಗಳ ಸಮೇತ ಬಂದಿದ್ದ ಬುರುಗಿ ತಿಬ್ಬೇಗೌಡ ಮತ್ತು ಕರಗಿ ಚಿಕ್ಕನಂಜೇಗೌಡನ ವಿಷಕಂಠಯ್ಯ, ಬುಸಿಗೌಡನ ಚನ್ನಯ್ಯ ಇವರುಗಳು 'ಇಕ್ಕಳಿ ಇವನ ಕಟ್ಟಿಗೆತ್ಕೊಹೋಗಿ ತುಳ್ದು ಬುಡನ' ಎಂದು ಕಾಳಯ್ಯನನ್ನು ಹಿಡಿದುಕೊಳ್ಳಲು ಹೋದರು. ಎಲ್ಲ ನೋಡಿ ಹೆದರಿ ಕಿರುಚಿಕೊಂಡ ಕಾಳಯ್ಯ ಊರಿಗೆ ಓಡಿಹೋದ ಎಂದು ತಿಳಿದು ಬಂದಿದೆ.

### ಆರು ಮೈಲಿ ನಡೆದು ದೂರು

ಎರಡು ದಿನ ನಡೆದ ಈ ತರದ ಘಟನೆಗಳಿಂದ ಭಯಗೊಂಡ ಹೆಗ್ಗೂರಿನ ಹರಿಜನರು ಇನ್ನು ಸುಮ್ಮನಿದ್ದರೆ ಕಷ್ಟ ಎಂದುಕೊಂಡು ತಾ. 20-4-77 ರಂದು ಹೆಗ್ಗೂರಿಂದ ಆರು ಮೈಲಿ ದೂರಕ್ಕಿರುವ ಬನ್ನೂರಿಗೆ ನಡೆದು ಬಂದು ಪೋಲೀಸಿಗೆ ದೂರು ಕೊಟ್ಟರು. ದೂರಿನ ಕಾಪಿಯನ್ನು ಸರ್ಕಲ್ ಇನ್ಸ್‌ಪೆಕ್ಟರ್, ತಾಸಿಲ್ದಾರ್ ಮತ್ತು ಡೆಪ್ಯುಟಿ ಕಮೀಷನರ್‌ಗಳಿಗೆ ಕಳುಹಿಸಿದರು. (ಕಳುಹಿಸಿದ್ದರ ರಶೀತಿ ಇಟ್ಟುಕೊಂಡಿದ್ದಾರೆ). ಇನ್ನು ಭಯ ಇಲ್ಲ ಎಂದುಕೊಂಡು ಸುಮ್ಮನಾದರು. ಆದರೆ ಇವರ ಊಹೆ ಸುಳ್ಳಾಯಿತು.

### ಮತ್ತೆ ಬುರುಗಿ ತಿಬ್ಬೆಗೌಡನ ಹಲ್ಲೆ

ಹರಿಜನರು ಕೊಟ್ಟ ದೂರು ಕೆಲಸ ಮಾಡಲಿಲ್ಲ. ದೂರುಕೊಟ್ಟ 8 ದಿನಕ್ಕೆ ಮತ್ತೆ ತಾ. 28. 4. 77 ರಂದು ಬುರುಗಿ ತಿಬ್ಬೆಗೌಡ ಅಕ್ರಮವಾಗಿ ಜಮೀನುಗಳನ್ನು ಉಳಿಸಲು ಶುರುಮಾಡಿದ. ಹೆಗ್ಗೂರಿನ ಹರಿಜನ ವಿಧವೆ ಶ್ರೀಮತಿ ಸೀಕ್ಲಿಯ ಜಮೀನನ್ನು (ಇವಳ ಜಮೀನನ್ನು ಸಹ ಬುರುಗಿ ತಿಬ್ಬೇಗೌಡ ಭೋಗ್ಯಮಾಡಿಕೊಂಡಿದ್ದ) ಕಟ್ಟೆ ಕೊಪ್ಪಲಿನ ಕುಕ್ಕೆ ಬೋರಮ್ಮನ ರಾಚ ಉಳುತ್ತಿದ್ದಾಗ ತಡೆದ ವಿಧವೆ ಸೀಕ್ಲಿ ಮತ್ತು ಮಗಳು ನಿಂಗಮ್ಮ (ಬಾಣಂತಿ) ನಿಗೆ ಹೀನಾಯವಾಗಿ ಹೊಡೆದದ್ದರಿಂದ ಅಸಹಾಯಕರಾದ ಈ ಹೆಂಗಸರು ಓಡಿ ಬರಬೇಕಾಯಿತು. ಇದೇ ದಿನ ಹೆಗ್ಗೂರಿನ ಯ|| ಕಾಳಯ್ಯ ತನ್ನ ಜಮೀನನ್ನು ಉಳಿಸುತ್ತಿದ್ದಾಗ ಅದೇ ಕುಕ್ಕೆ ಬೋರಮ್ಮನ ರಾಚ ಹೇರಿಗೆ ಅಡ್ಡ ನಿಂತು ತಡೆದನೆಂದೂ, ಆಗ ಕಾಳಯ್ಯನ ಹೆಂಡತಿ ದೊಡ್ಡಮ್ಮ 'ಜಮೀನಿಗೂ ನಿನಗೂ ಏನು ಸಂಬಂಧ ಎಂದು ಕೇಳಿದ್ದಕ್ಕೆ ಅವಳಿಗೆ ಕಪಾಲಕ್ಕೆ ಹೊಡೆದದ್ದರಿಂದ ಪ್ರಜ್ಞೆ ತಪ್ಪಿ ಬಿದ್ದ ದೊಡ್ಡಮ್ಮನಿಗೆ ಸಿಕ್ಕ ಸಿಕ್ಕದ್ದರಲ್ಲಿ ಹೊಡೆದದ್ದಲ್ಲದೆ ಅವಳ ಸೀರೆ ಹರಿದು ಮಾನಭಂಗ ಮಾಡಿದನೆಂದು ಗೊತ್ತಾಗಿದೆ. ಈ ಬಗ್ಗೆ ಕಾಳಯ್ಯ ಬನ್ನೂರಿಗೆ ನಡೆದು ಬಂದು ಪೋಲೀಸಿಗೆ ಕಂಪ್ಲೇಂಟ್ ಕೊಟ್ಟಿದ್ದು ದೊಡ್ಡಮ್ಮನನ್ನು ಬನ್ನೂರಿನ ಸರ್ಕಾರಿ ಆಸ್ಪತ್ರೆಗೆ ಸೇರಿಸಲಾಗಿದೆ.

### ಖಾಜಿ ನ್ಯಾಯದ ಸಬ್ ಇನ್ಸ್‌ಪೆಕ್ಟರ್

ಕಟ್ಟೆಕೊಪ್ಪಲಿನ ಬುರುಗಿ ತಿಬ್ಬೆಗೌಡ ಹೆಗ್ಗೂರಿನ ಹರಿಜನರ ಮೇಲೆ ನಡೆಸಿರುವ ಈ ಎಲ್ಲಾ ಹಲ್ಲೆ ಮತ್ತು ಗೂಂಡಾಗಿರಿ ಪ್ರಕರಣಗಳೆಲ್ಲ ಬನ್ನೂರಿನ ಪೋಲೀಸಿಗೆ ತಿಳಿದಿದ್ದು ಈ ಬಗ್ಗೆ ಹರಿಜನರು ದೂರು ಸಲ್ಲಿಸಿದ್ದರೂ ಯಾವ ರಕ್ಷಣೆಯ ಕ್ರಮವನ್ನೂ ತೆಗೆದುಕೊಂಡಿಲ್ಲ. ಬನ್ನೂರಿನ ಸಬ್ ಇನ್ಸ್‌ಪೆಕ್ಟರ್ ಬುರುಗಿತಿಬ್ಬೇಗೌಡನ ಪರ ಇದ್ದು ಹಲ್ಲೆ ನಡೆಸಿದವರನ್ನು ಸುಮ್ಮನೆ ಹಿಡಿದಂತೆ ನಾಟಕವಾಡಿ ಹೆಗ್ಗೂರಿನ ಹರಿಜನರಿಗೆ "ನೀವು ನೀವೆ ರಾಜಿ ಮಾಡಿಕೊಳ್ಳಿ" ಎಂದು ಉಪದೇಶ ಹೇಳುತ್ತಿದ್ದಾರೆ ಎಂದು ಗೊತ್ತಾಗಿದೆ. ಇದರಿಂದ ಕಟ್ಟೆಕೊಪ್ಪಲಿನ ಬುರುಗಿ ತಿಬ್ಬೆಗೌಡ ಮತ್ತಿತರ ಒಕ್ಕಲಿಗ ಜಾತಿಯ ಜಮೀನ್ದಾರರುಗಳ ಗೂಂಡಾಗಿರಿ ಮತ್ತು ದೌರ್ಜನ್ಯ ಇನ್ನೂ ಹೆಚ್ಚಾಗುವ ಸಾಧ್ಯತೆಗಳಿದ್ದು ಹೆಗ್ಗೂರಿನ ಹರಿಜನರು ಭಯಭೀತಿಗೆ ಒಳಗಾಗಿದ್ದಾರೆ.

**ಸವರ್ಣೀಯ ವಿದ್ಯಾರ್ಥಿನಿಯರಿಂದ ಕಿರುಕುಳ**

# ನ್ಯಾಯವೂ ಇಲ್ಲ, ಇತ್ತ ನೆಮ್ಮದಿಯೂ ಇಲ್ಲ

(ನಮ್ಮ ಪ್ರತಿನಿಧಿಯಿಂದ)

ಮೈಸೂರು ಮಹರಾಣಿ ಕಾಲೇಜು ಹಾಸ್ಟಲಿನಲ್ಲಿ ಮೇ 6–7 ರಂದು ಕೂರ್ಗಿ ಮತ್ತು ಹರಿಜನ ವಿಧ್ಯಾರ್ಥಿನಿಯರ ನಡುವೆ ಜಗಳ ಆಗಿದ್ದು, ಜಗಳದಲ್ಲಿ ಹೊಡೆತ ಮತ್ತು ಅವಮಾನಕ್ಕೆ ಒಳಗಾಗಿರುವ ಹರಿಜನ ವಿಧ್ಯಾರ್ಥಿನಿಯರು ಈಗ ನಡೆಯುತ್ತಿರುವ ಪರೀಕ್ಷೆಗಳಿಗೂ ಸರಿಯಾಗಿ ಹೋಗದಂತ ಭಯದ ವಾತಾವರಣ ಉಂಟಾಗಿದೆ.

ಹರಿಜನ ವಿದ್ಯಾರ್ಥಿನಿಯರು ಹಾಸ್ಟೆಲಿನ ಪ್ರಿಫೆಕ್ಟರ್ ಆಗಿರುವುದನ್ನು ಸಹಿಸದ ಕೆಲವು ಸವರ್ಣೀ ವಿದ್ಯಾರ್ಥಿನಿಯರು ಈ ಘಟನೆಗೆ ಮುಖ್ಯ ಕಾರಣವಾಗಿದ್ದು ಇವರುಗಳ ಮೇಲೆ ಇನ್ನೂ ಯಾರೂ ಸೂಕ್ತ ಕ್ರಮ ತೆಗೆದುಕೊಳ್ಳದಿರುವುದರಿಂದ ಈ ತರದ ಭಯದ ವಾತಾವರಣ ಉಂಟಾಗಿದೆ.

### ಹೊಲತಿಯರಿಗೇಕೆ ಹೇಳಬೇಕು ?

ಈ ವರ್ಷದ ಕಾಲೇಜು ದಿನಗಳು ಮುಗಿದು ಮಾರ್ಚಿ ಕೊನೆಯ ವಾರಕ್ಕೆ ರಜಾ ಸಿಕ್ಕಿದ್ದರಿಂದ ಬಹಳಷ್ಟು ವಿದ್ಯಾರ್ಥಿನಿಯರು ಊರುಗಳಿಗೆ ಹೋದರು. ಈ ಸಮಯಕ್ಕೆ ಸವರ್ಣೀಯ ವಿಧ್ಯಾರ್ಥಿನಿಯರಾರೂ ಮೆಸ್ ಪ್ರಿಫೆಕ್ಟರ್ ಆಗಲು ಮುಂದೆ ಬಾರದ್ದರಿಂದ ಹರಿಜನ ವಿಧ್ಯಾರ್ಥಿನಿಯರಾದ ಹೇಮ, ಮಲ್ಲಾಜಮ್ಮ ಮತ್ತು ಸರೋಜ ಫಿಫೆಕ್ಟರ್ ಷಿಪ್ಪನ್ನು ವಹಿಸಿಕೊಂಡರು. ಈ ಮಧ್ಯೆ ಊರಿಂದ ವಾಪಸ್ಸು ಬಂದ ವಿದ್ಯಾರ್ಥಿನಿಯರು ಈ ಮೆಸ್ ಪ್ರಿಫೆಕ್ಟರುಗಳಿಗೆ ತಿಳಿಸಿ ನಂತರ ಊಟ ತೆಗೆದುಕೊಳ್ಳಬೇಕಾಗಿತ್ತು. ಆದರೆ ಊರಿಂದ ವಾಪಸ್ಸು ಬಂದ ಮುತ್ತಮ್ಮ, ವಿನುತಾ, ರೂಪಾ, ಜೋತಿ ಎನ್ನುವ ಕೂರ್ಗಿ ವಿದ್ಯಾರ್ಥಿನಿಯರು ಯಾರಿಗೂ ತಿಳಿಸದೆ ಊಟ ಮಾಡುತ್ತಿದ್ದರೆಂದೂ, ಇದನ್ನು ಕೇಳಿದ ಪ್ರಿಫೆಕ್ಟರು ಹೇಮ, ಮಲ್ಲಾಜಮ್ಮ ಮತ್ತು ಸರೋಜ ಇವರುಗಳನ್ನು ''ಏ ಹೊಲತಿಯರೇ ನಿಮಗೇಕೆ ನಾವು ಹೇಳಿ ಊಟ ಮಾಡಬೇಕು, ನಿಮ್ಮ ಹಾಗೆ ನಾವು ಬಿಟ್ಟಿ ತಿನ್ನುತ್ತಿಲ್ಲ'' ಎಂದು ಗದರಿಸಿ ಗಲಾಟೆ ಮಾಡಿದರೆಂದು ಗೊತ್ತಾಗಿದೆ. ಗಲಾಟೆಯಾದಾಗ ವಾರ್ಡನ್ ರವರು ಬಂದು ಸಮಾದಾನ ಹೇಳಿ ಹೋದ ಮೇಲೂ ಸವರ್ಣೀಯ ವಿದ್ಯಾರ್ಥಿನಿಯರು ಹರಿಜನ ವಿದ್ಯಾರ್ಥಿನಿಯರನ್ನು ಸಿಕ್ಕ ಸಿಕ್ಕಲ್ಲಿ ಬಯ್ಯುವುದು ಮತ್ತು ಓದುತ್ತಿರುವಾಗ ತೊಂದರೆ ಕೊಡುವುದು ಮಾಡಿದರೆಂದೂ ಮಾರನೆಯ ದಿನ ತಾ. 7. 5. 77 ರಂದು ಪ್ರಿನ್ಸಿಪಾಲರು ಎರಡೂ ಕಡೆಯುವರನ್ನು ಕರೆದು "ಹೀಗೆ ಮಾಡಬಾರದೆಂದು" ಹೇಳಿದರೆಂದು ತಿಳಿದುಬಂದಿದೆ. ಆದರೆ ಇದೇ ದಿನ ರಾತ್ರಿ ೨ ಗಂಟೆಗೆ ಊಟಮಾಡಲು ಹರಿಜನ ವಿದ್ಯಾರ್ಥಿನಿಯರು ಡೈನಿಂಗ್ ಹಾಲಿಗೆ ಹೋದಾಗ ಮುತ್ತಮ್ಮ ಶಾಲಿನಿ, ರೂಪ, ಜ್ಯೋತಿ, ವಿನೂತ ಎನ್ನುವ ಅದೇ ಸವರ್ಣೀಯ ವಿದ್ಯಾರ್ಥಿನಿಯರು ಹರಿಜನ ವಿದ್ಯಾರ್ಥಿನಿಯರೊಂದಿಗೆ ಜಗಳಕಾದು ಮಹದೇವಮ್ಮ ಎಂಬ ಹುಡುಗಿಯನ್ನು ಹೊಡೆದು ಚಾಕು ತೋರಿಸಿದಾಗ ಹೆದರಿದ ಹರಿಜನ ವಿದ್ಯಾರ್ಥಿನಿಯರು ರೂಮಿಗೆ ಓಡಿಹೋದರೆಂದೂ ಈ ಸಮಯಕ್ಕೆ ಬಂದ ವಾರ್ಡನ್‌ರವರೂ ಸಹ ಈ ಬಗ್ಗೆ ಏನೂ ಮಾತನಾಡಲಿಲ್ಲವೆಂದು ಗೊತ್ತಾಗಿದೆ.

### ನ್ಯಾಯದ ಬರವಸೆ ಇಲ್ಲ

ಹರಿಜನ ವಿದ್ಯಾರ್ಥಿನಿಯರನ್ನು ಹೊಡೆದವರೇ ತಾ. 8. 5. 77 ರಂದು ಪೋಲೀಸಿಗೆ ದೂರು ಕೊಟ್ಟಿದ್ದರೆಂದೂ ನಂತರ ಬಂದ ಎಸ್. ಪಿ ಯವರು ಎರಡು ಕಡೆಯ ವಿದ್ಯಾರ್ಥಿನಿಯರನ್ನೂ ಕರೆಸಿ "ಇದನ್ನು ನಿಮ್ಮ ಪ್ರಿನ್ಸಿಪಾಲರೇ ತೀರ್ಮಾನ ಮಾಡುತ್ತಾರೆ" ಎಂದು ಹೇಳಿ ಹೋದರೆಂದೂ ಗೊತ್ತಾಗಿದೆ. ಪ್ರಿನ್ಸಿಪಾಲರು ಈ ಘಟನೆಯ ವಿವರವನ್ನು ತಿಳಿಯಲು ಒಬ್ಬ ಉಪಾಧ್ಯಾಯರನ್ನು ನೇಮಿಸಿದ್ದರೆಂದೂ ಆದರೆ ಅವರು ಸವರ್ಣೀಯ ವಿದ್ಯಾರ್ಥಿನಿಯರ ಪರವಾದ ಹೇಳಿಕೆಗಳನ್ನೇ ಹೆಚ್ಚು ಬರೆದುಕೊಂಡು ಹೋಗಿರುವುದರಿಂದ ನಮಗೆ ನ್ಯಾಯ ದೊರಕುವ ಬರವಸೆ ಇಲ್ಲವೆಂಡೂ ಮತ್ತು ಇನ್ನೂ ಮಧ್ಯೆ ಮಧ್ಯೆ ಕೊಡುತ್ತಿರುವ ತೊಂದರೆಗಳಿಂದಾಗಿ ನಾವು ಪರೀಕ್ಷೆಗಳಿಗೆ ಓದುವುದೇ ಕಷ್ಟವಾಗಿದೆ ಎಂದು ಹರಿಜನ ವಿದ್ಯಾರ್ಥಿನಿಯರು ಆತಂಕಗೊಂಡಿದ್ದಾರೆ.

## ಮುಂದುವರೆದ –ಅನ್ಯಾಯಕ್ಕೆ ಕುಮ್ಮಕ್ಕು

"ಮೈಸೂರು ಮಹಾರಾಜ ಕಾಲೇಜು ಹಾಸ್ಟಲಿನ ಅಧ್ಯಕ್ಷ ಮತ್ತು ನಿಲಯಪಾಲರಿಂದ ಅನ್ಯಾಯಕ್ಕೆ ಕುಮುಕ್ಕು"—ಇನ್ನೂ ಹಾಗೆಯೇ ನಡೆದಿದೆ. ತಮಗೆ ಆದ ಅನ್ಯಾಯಗಳನ್ನು ಪ್ರತಿಭಟಿಸಿ ನ್ಯಾಯಕ್ಕಾಗಿ ಒತ್ತಾಯಿಸಲು ತಾ. 7. 4. 1977 ರಂದು ನಡೆದ ವಿದ್ಯಾರ್ಥಿನಿಲಯದ ವಾರ್ಷಿಕೋತ್ಸವನ್ನು ಬಹಿಷ್ಕರಿಸಿದ ದಲಿತ ವಿದ್ಯಾರ್ಥಿಗಳು, ತಾ. 14. 4. 1977ರಂದು ಮೈಸೂರು ನಗರ ಅನುಸೂಚಿತ ಜಾತಿ ಮತ್ತು ಪಂಗಡಗಳ ವಿದ್ಯಾರ್ಥಿ ಒಕ್ಕೂಟದ ಸಮಾರಂಭದಲ್ಲಿ ತಮಗೆ ವಿದ್ಯಾರ್ಥಿ ನಿಲಯದಲ್ಲಿ ಆದ ಆಗುತ್ತಿರುವ ಅನ್ಯಾಯಗಳನ್ನು ವಿಷದವಾಗಿ ಹೇಳಿ ಇದಕ್ಕೆ ಕಾರಣರಾದವರ ಮೇಲೆ ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂದು ಸರ್ಕಾರವನ್ನು ಒತ್ತಾಯಿಸಿದರು. ಆದರೂ ಇದುವರೆಗೆ ದಲಿತ ವಿದ್ಯಾರ್ಥಿಗಳಿಗೆ ನ್ಯಾಯ ದೊರಕಿಸುವ ಯಾವ ಸೂಚನೆಗಳೂ ಕಂಡುಬಂದಿಲ್ಲ. ಬದಲಿಗೆ ವಿದಾರ್ಥಿನಿಲಯದಲ್ಲಿ ಸ್ನೇಹ ಸೌಹಾರ್ಧ ಉಂಟುಮಾಡಬೇಕಾದ ಅಧ್ಯಕ್ಷ ಶ್ರೀ ಶಂಕರಲಿಂಗಯ್ಯನವರು ದಲಿತ ವಿದ್ಯಾರ್ಥಿಗಳನ್ನು "ಯಾಕೆ ಹೀಗೆ ಮಾಡಿದ್ದೀರಿ" ಎಂದು ಗದರಿಸಿದರೆಂದು ಗೊತ್ತಾಗಿದೆ.

### ಕಿಚ್ಚು

ನನ್ನ ನೊಂದ ಉಸಿರಿಂದ ಬಸುರಾಹ
ಬೆವರನೇ ಉಂಡು ಬೆಳೆದ
ಮೈಯನ್ನೆಲ್ಲಾ ಹಿಂಡಿ ಹಿಪ್ಪೆ ಮಾಡಿ
ಕೊಬ್ಬಿ ಉಬ್ಬಿ ದೈತ್ಯಾಕಾರ ತಳೆದ
ಓ ದಲಿತ ದೌರ್ಜನ್ಯವೇ,
ಅಂದು ನಿನ್ನ ದೈತ್ಯಾಕಾರಕೆ ಬೆದರಿ
ಕುಬ್ಜನಾಗಿ ಗುಲಾಮನಾಗಿದ್ದೆ.
ನಿನ್ನ ಪಾಪಿ ಪಾದಗಳಿಗೆ ಎದೆಯನೊಡ್ಡಿ
ಮೇಲಕ್ಕೇರಿಸಲು ಮೆಟ್ಟಿಲಾಗಿದ್ದೆ.
ನಿನ್ನ ಅಟ್ಟಹಾಸದ ತುಳಿತಕ್ಕೆ
ಎತ್ತ ಬೇಕತ್ತ ಮೈ ತೆತ್ತಿದ್ದೆ.
ಹಾಗಿದ್ದರೂ ಕಿಂಚಿತ್ತಾದರೂ ಕನಿಕರ ಬಂದಿತೇ ನಿನಗೆ ?
ಇಂದು ನಿನ್ನಾಗಿನ ತುಳಿತದ ಘರ್ಷಣೆಗೆ ಸಿಕ್ಕಿ ಸಿಕ್ಕಿ
ಮೈಯಲೆಲ್ಲಾ ಬಿಸಿ ಉಕ್ಕಿ ಉಕ್ಕಿ
ಕಿಚ್ಚಾಗಿದ್ದೇನೆ ಕಿಚ್ಚು;
ತೀರಿಸಿಕೊಳ್ಳಲು ನನ್ನ ರೊಚ್ಚು

ಹಾ. ನಾಗರಾಜು

# ಇಂತಹ ಅತ್ಯಾಚಾರ ನಿಲ್ಲುವುದು ಎಂದು?

ಮಾನ್ಯರೆ,

ಕಳೆದವಾರ ಈ ಪುಟ್ಟ ಗ್ರಾಮದಲ್ಲಿ ನಡೆದ "ಸಿಡಿ"ಯ ಬಗೆಗೆ ಕೆಲವು ಮಾತು ಬರೆಯಲೇಬೇಕೆನಿಸಿ ಈ ಪತ್ರ ಬರೆಯುತ್ತಿದ್ದೇನೆ. ಸುಮಾರು ನಾಲ್ಕಾರು ತಿಂಗಳ ಹಿಂದೆ ಈ ಹಳ್ಳಿಗೆ ಹೊಸದಾಗಿ ಸೊಸೆಯಾಗಿ ಬಂದ ನನ್ನನ್ನು ಸ್ನೇಹಿತೆಯೊಬ್ಬರು "ನೀವೇನಾದರೂ ಹರಿಜನರಾಗಿದ್ದರೆ ಗ್ರಾಮದೇವತೆಗೆ "ಸಿಡಿ" ಸೇವೆ ಸಲ್ಲಿಸಬಹುದಿತ್ತು" ಎಂದು ತಮಾಷೆ ಮಾಡಿದರು. "ಏನು ಹಾಗೆಂದರೆ?" ಎಂದು ಕೇಳಿದಾಗ ರೋಮಾಂಚಕಾರಿ ವೇದನಾಪೂರ್ಣ ಮಾಹಿತಿ ದೊರಕಿತು. ಅನಂತರ ಕಳೆದವಾರ ಪ್ರತ್ಯಕ್ಷದರ್ಶಿಯಾಗಿ ಅದನ್ನು ನೋಡುವ ಅವಕಾಶವೂ ಆಯ್ತು. ಅದು ಹೀಗೆ:

ಪ್ರತಿ ವರ್ಷ ಚೈತ್ರ ಮಾಸದ ಒಂದು ಶುಕ್ರವಾರ ಗ್ರಾಮದೇವತೆ ಕಿರಾಳಮ್ಮನ ತೇರು ಆಗುತ್ತದೆ. ಇದರಲ್ಲಿ ಏನೂ ವಿಶೇಷವಿಲ್ಲ. ಸೇರುವ ಜನರು ಕಡಿಮೆ. ಮರುದಿನ ಶನಿವಾರ ಕಿರಾಳಮ್ಮ ಮಾದಿಗರ ಕೇರಿಗೆ ಹೋಗಿ ಅಲ್ಲಿ ಭಾನುವಾರದ "ಸಿಡಿ"ಗೆ ಬೆಸ ಸಂಖ್ಯೆಯಲ್ಲಿ (ಐದು ಏಳು ಒಂಬತ್ತು ಈ ರೀತಿ) ಮಹಿಳೆಯರನ್ನು ಆಯ್ಕೆ ಮಾಡುತ್ತದೆ. "ಹೊಸದಾಗಿ ಮದುವೆ ಆದವರಿಗೆ ಪ್ರಾಶಸ್ತ್ಯವಿದೆ. ಈ ನಿರಪರಾಧಿಗಳನ್ನು ಎರಡು ದಿನ ಉಪವಾಸ ಹಾಕುತ್ತಾರೆ. ಭಾನುವಾರ ಸಂಜೆ ತಮಟೆಯ ರೌದ್ರನಾದದೊಂದಿಗೆ ಎಲ್ಲ ಕಾರ್ಯಕ್ರಮಗಳು ಆರಂಭವಾಗುತ್ತದೆ. ಸಿಡಿಗೆ ಆಯ್ಕೆಯಾದ ಮಹಿಳೆಯರನ್ನು ಪೂರ್ತಿ ಅರಿಸಿನ ಪೂಸಿ ಕಚ್ಚೆ ಸೀರೆ ಉಡಿಸಿ ಸಿದ್ಧಪಡಿಸುತ್ತಾರೆ. ಸಿದ್ಧವಾದ ವ್ಯಕ್ತಿಗಳನ್ನು ಕ್ರಮವಾಗಿ "ಸಿಡಿ"ಗೆ ಗುರಿಪಡಿಸುತ್ತಾರೆ. ಸಂಜೆ ಸುಮಾರು 4-30ಕ್ಕೆ ಮೊದಲನೆಯ ಮಹಿಳೆಯನ್ನು ಕಿರಾಳಮ್ಮನ ಮುಂದೆ ಅರೆಬಾಗಿದ ಸ್ಥಿತಿಯಲ್ಲಿ ನಿಲ್ಲಿಸುತ್ತಾರೆ. ಕಂಬಳಿ ಹುರಿಯ ಇಕ್ಕೆಡೆಗಳಲ್ಲಿ ನಾಲ್ಕೈದು ಇಂಚು ಉದ್ದವಾಗಿದ ಕೊಕ್ಕೆಗಳನ್ನು ಹರಿತಗೊಳಿಸಿರುತ್ತಾರೆ. ಆಗ ತಮಟೆಯ ನಾದದ ರೌದ್ರತೆ ತಾರಕಕ್ಕೆ ಏರುತ್ತದೆ. ಸುತ್ತಣ ಜನ ಸಿಳ್ಳೆ ಹೊಡೆಯುತ್ತಾರೆ. ವ್ಯಕ್ತಿಗೆ ಒಂದು ರೀತಿ ಆವೇಶ ಗಾಬರಿಯ ಸ್ಥಿತಿ ಬರುತ್ತದೆ. ಆಗ ಅನುಭವಿ ಮುದುಕರೊಬ್ಬರು ಆಕೆಯ ಬೆನ್ನು ಹುರಿಯ ಮೇಲಿನ ಚರ್ಮ ಒಂದಿಂಚು ಮೇಲೆತ್ತಿ ಎರಡೂ ಕಡೆಗಳಿಂದ ಕೊಕ್ಕೆಗಳನ್ನು "ಮತ್ತೊಂದು ಕಡೆಯಿಂದ ಹೊರಬರುವಂತೆ" ಚುಚ್ಚುತ್ತಾರೆ. ರಕ್ತ ಬರದಂತೆ ಅರಿಸಿನ ಸುರಿದು ಕಂಬಳಿ ಹುರಿಯನ್ನು ಆಕೆಯ ಕತ್ತಿಗೆ ಮಾಲೆ ಹಾಕುತ್ತಾರೆ. ಅದನ್ನು ಕಂಡು ಮಹಿಳೆಯ ಕಣ್ಣಿನಲ್ಲಿ ಮಹಿಳೆಯರು ಶತಶತ ಮಾನಗಳಿಂದ ಅನುಭವಿಸಿದ ನೋವು ತುಂಬಿದೆ ಎನಿಸಿತು ನನಗೆ. ಅವಳನ್ನು ಸನಿಹದ ಸಿಡಿ ಮೈದಾನಕ್ಕೆ ಕರೆತರುತ್ತಾರೆ.

ಅಲ್ಲಿ ಒಂದು ಬಗೆಯ ಏತದಂತಹ ಸಿಡಿಗಂಬ ಸಿದ್ಧವಾಗಿರುತ್ತದೆ. ಸಾವಿರಾರು ಜನ ಕಿಕ್ಕಿರಿದಿರುತ್ತಾರೆ. ಕೊಕ್ಕೆಯನ್ನು ಚುಚ್ಚಿ ಸಿದ್ಧಗೊಳಿಸಿದ ಮಹಿಳೆಯನ್ನು ಕಳಸದಾರಿ ಹುಡುಗಿ ಪೂಜಾರಿ ಬಡಿಯುತ್ತಿರುವ ತಮಟೆ ಇವುಗಳ ವಿಶಿಷ್ಟ ಮೆರವಣಿಗೆಯೊಂದಿಗೆ ಕರೆತರುತ್ತಾರೆ. ಮಹಿಳೆಯನ್ನು ಇಳಿಸಿದ ಸಿಡಿಗಂಬದ ಮೇಲ್ತುದಿಗೆ ಬಟ್ಟೆ ಹಾಕಿ ಬಿಗಿಯುತ್ತಾರೆ. ಕೈಗೊಂದು ಕೋಲು ಕೊಟ್ಟಿರುತ್ತಾರೆ. ಸಿಡಿಗಂಬದ ಇನ್ನೊಂದು ತುದಿಯನ್ನು ಹಗ್ಗದಿಂದ ಕೆಳಗೆಳೆದು ಮಹಿಳೆಯನ್ನು ಮೇಲೆರಿಸುತ್ತಾರೆ. ಸುಮಾರು 25 ಅಡಿ ಎತ್ತರದಲ್ಲಿ ವೇಗವಾಗಿ ತಿರುಗುವ ಸಿಡಿಗಂಬದ ಮೇಲೆ ಈಜಾಡುವ ಬಗೆಯಲ್ಲಿ ಅವಳು ಕೈಕಾಲಾಡಿಸುತ್ತಾಳೆ. ಇದೇ "ಸಿಡಿ" ಇದು ಸಾಲದೆಂಬಂತೆ ಕೆಳಗಿರುವ "ಮಹಾಜನತೆ" ಬಾಳೆಹಣ್ಣು ಉಂಡೆ ಇತ್ಯಾದಿಗಳನ್ನು ಅವಳೆಡೆ ಗುರಿಯಿಟ್ಟು ಬೀಸಿ ಒಗೆಯುತ್ತಾರೆ. ಅವು ಎಲ್ಲಾದರೂ ತಗುಲಿದರೆ ಆಗುವ ನೋವು ಅವರ್ಣನೀಯ. ಹತ್ತಾರು ಸುತ್ತುಗಳು ತಿರುಗಿದ ನಂತರ ಅವಳನ್ನು ಕೆಳಗಿಳಿಸಿ ಮತ್ತೆ ವಾಪಸು ಕಿರಾಳಮ್ಮನ "ಸನ್ನಿಧಿ"ಗೆ ಕರೆದೊಯ್ದು ಸಾಷ್ಟಾಂಗ ನಮಸ್ಕಾರ ಮಾಡಿಸಿ ಕೊಕ್ಕೆ ಕೀಳುತ್ತಾರೆ. ಇನ್ನೊಬ್ಬ ಮಹಿಳೆ ಆಗಲೇ ಸಿದ್ಧವಾಗಿರುತ್ತಾಳೆ. ಚಕ್ರ ತಿರುಗುತ್ತದೆ.

ನನಗನಿಸುತ್ತದೆ- ನಾವು ನಗರಗಳಲ್ಲಿ ಹೇಳುವ ಅಂತರರಾಷ್ಟ್ರೀಯ ಮಹಿಳಾ ವರ್ಷ ಮಹಿಳಾ ದಶಕಗಳು ಹಳ್ಳಿಗಳಿಗೆ ಅಲ್ಲವೆಂದು ಕಾಣುತ್ತದೆ. ಇಲ್ಲಿ ನೋಡಿದರೆ ಮಹಿಳೆ ಹತ್ತಾರು ಶತಮಾನಗಳ ಹಿಂದೆಯೆ ನಿಂತು ಅಮಾನವೀಯ ಹಿಂಸೆಗೆ ತುತ್ತಾಗುತ್ತಲೇ ಇದ್ದಾಳೆ. ನನಗಂತು ತಮಟೆ ಸದ್ದಿಗೇ ಎದೆ ನಡುಗುತ್ತದೆ. ಹರಿಜನರ ಮೇಲಿನ ಇಂತಹ ಅತ್ಯಾಚಾರಗಳು ನಿಲ್ಲುವುದು ಎಂದು? ಪ್ರಾಯಶಃ ಇದಕ್ಕೆ ಸುಲಭ ಉತ್ತರವಿರಲಾರದು.

—ಕಾಂಚನಗಂಗಾ

ಅಜ್ಜಂಪುರ.

(ಕನ್ನಡಪ್ರಭದಲ್ಲಿ ಒಂದು ಪತ್ರ 23-4-1977)

# ಹೊರೆಯಾಲದಲ್ಲಿ ಹರಿಜನರಿಗೆ ಹೊಡೆತ

(ವರದಿ: ಮರಿಸ್ವಾಮಿ ಹೊಸಹಳ್ಳಿ)

ಕಳೆದ ಲೋಕಸಭಾ ಚುನಾವಣೆಯನಂತರ ಗ್ರಾಮಾಂತರ ಪ್ರದೇಶಗಳಲ್ಲಿ ದಲಿತರ ಮೇಲೆ ಪ್ರಬಲ ದೌರ್ಜನ್ಯಗಳು ನಡೆಯುತ್ತಾ ಇದ್ದು, ಇಂತದೇ ಒಂದು ದೌರ್ಜನ್ಯದ ಘಟನೆ ತಾರೀಖು 20-4-77 ನೇ ಬುಧವಾರ ಗುಂಡ್ಲುಪೇಟೆ ತಾಲ್ಲೂಕು ಹೊರೆಯಾಲ ಗ್ರಾಮದಲ್ಲಿ ಸಂಭವಿಸಿದೆ. ಈ ಘಟನೆಗೆ ಮುಖ್ಯ ಕಾರಣವೆಂದರೆ ಇದೇ ಗ್ರಾಮದಲ್ಲಿ ವಾಸವಾಗಿರುವ ಪರಿವಾರ ಕೋಮಿಗೆ ಸೇರಿದ ತಿಮ್ಮನಾಯಕನಿಗೆ ಹರಿಜನ ಕೋಮಿನ ಮಾದಯ್ಯನು ತನ್ನ ಒಂಬತ್ತು ಎಕರೆ ಭೂಮಿಯನ್ನು ಸುಮಾರು 35 ವರ್ಷಗಳ ಹಿಂದೆ ಬೋಗ್ಯ ಹಾಕಿದ್ದು, ಆಗಿನಿಂದಲೂ ತಿಮ್ಮನಾಯಕನ ಮಕ್ಕಳು ಫಸಲನ್ನು ಪಡೆಯುತ್ತಾ ಇದ್ದರು. ಈ ಮಧ್ಯೆ ಕಾಂಗ್ರೆಸ್ ಸರ್ಕಾರ ಹೊರಡಿಸಿದ ಭೂ ಒಡೆತನ ಕಾಯಿದೆ ಪ್ರಕಾರ ಹರಿಜನರ ಮಾದಯ್ಯ ನಂಜನಗೂಡಿನ ಸಬ್‌ಡಿವಿಜ಼ನ್ ಮ್ಯಾಜಿಸ್ಟ್ರೇಟರ ಕಛೇರಿಗೆ ಒಂದು ವರ್ಷದ ಹಿಂದೆ ಡಿಕ್ಲರೇಷನ್ ಕೊಟ್ಟನು. ಅದರ ಪ್ರಕಾರ ಭೂಮಿಯು ಇನ್ನೂ ಇತ್ಯರ್ಥವಾಗುವುದರಲ್ಲೇ ಇತ್ತು. ಈ ಮಧ್ಯೆ ತಿಮ್ಮನಾಯಕನ ಮಕ್ಕಳು ಮತ್ತು ಮಾದಯ್ಯನ ಮಕ್ಕಳು ಗುಂಡ್ಲುಪೇಟೆ ಪೋಲಿಸ್ ಠಾಣೆಗೆ ಹೋಗಿ ಭೂ ಒಡೆತನ ಇತ್ಯರ್ಥವಾಗುವವರೆಗೂ ಭೂಮಿಯ ಹತ್ತಿರಕ್ಕೆ ಹೋಗುವುದಿಲ್ಲವೆಂದುಇಬ್ಬರೂ ಸಹಿ ಹಾಕಿರುತ್ತಾರೆ. ಆದರೂ ತಿಮ್ಮನಾಯಕನ ಮಕ್ಕಳು ಭೂಮಿಯನ್ನು ಉಳುವುದಕ್ಕೆ ಹೋದಾಗ ಭೂಮಿಯ ಮೂಲ ಒಡೆಯರಾದ ಮಾದಯ್ಯನ ಮಕ್ಕಳು ತಡೆಹಿಡಿದರು. ಇದರ ಪರಿಣಾಮವಾಗಿ ಇಬ್ಬರ ನಡುವೆ ಘರ್ಷಣೆ ನಡೆದು ತಿಮ್ಮನಾಯಕನ ಮಕ್ಕಳು ಮಾದಯ್ಯನಿಗೆ ಮತ್ತು ಹೆಂಗಸು ಮಕ್ಕಳಿಗೆ ಮನಬಂದಂತೆ ಥಳಿಸಿದ್ದಾರೆ.

## ಮರೆಯದಿರು ಒಡೆಯ

ಹಸಿದ ಹೊಟ್ಟೆ ಹಳಸಿದ ಅನ್ನಕ್ಕೂ ಸೊನ್ನೆ
ಮುಡಿಮುಡಿದು ಸೊರಗಿದೆ ನೋಡ ಈ ನನ್ನ ಜೀವ
ಒಡೆಯಾ ನೀ ಬಿಸಿ ಉಂಡುಂಡು ಉಬ್ಬಿ ಈ ಧರೆಗೆ ಭಾರ
ದರಿದ್ರದ ಜೀವನ ನಿನಗೇಕೆ? ಓ ನನ್ನ ಒಡೆಯಾ ...... ?

ಉತ್ತೋದು ಬಿತ್ತೋದು ನಾನಾದರೆ
ಶ್ರಮದ ಪ್ರತಿಫಲದ ಒಡೆಯ ನೀನು
ನೀನೆ ಮಾತು ಮಾತಿಗೂ ಹೇಳುವ "ನೀತಿ ನ್ಯಾಯ"
ಅಂಗಂದರೇನು ಹೇಳು ಓ ನನ್ನ ಒಡೆಯ ?

ಬಿಸಿಲಲ್ಲಿ ನಡೆಯುವೆಯೆಂದು ಮೆಟ್ಟೊಲಿದುಕೊಟ್ಟೆ
ನಿನ್ನ ಮನೆ ಉದ್ಧಾರಕೆ ಬೆವರ ಹರಿಬಿಟ್ಟೆ
ಹಾಗಿದ್ದರೂ ನನಗಿಲ್ಲ ಒಟ್ಟುಬಟ್ಟೆ ?
—ಇಂಥ ನಾನು
ಮತ್ತು ನಾವು ನಿನ್ನ
ಹಾಯಾಗಿ ಮಲಗಿಸುವೆವು ಆರಡಿ ನೆಲದೊಳಗೆ
ಮರೆಯದಿರು ಓ ನನ್ನ ಒಡೆಯಾ........ !

— ಅಪ್ಪಾಜಿ ನೀಲಗಿರಿ

## ದೇವರ ಗೂಂಡಾಗಿರಿ !

ಮಂಡ್ಯ ತಾಲ್ಲೂಕಿಗೆ ಸೇರಿದ 'ತಗ್ಗಹಳ್ಳಿ' ಎಂಬ ಗ್ರಾಮದಲ್ಲಿ ಇತ್ತೀಚೆಗೆ ಗ್ರಾಮದೇವತೆಯ ಹಬ್ಬವನ್ನು ಆಚರಿಸಲಾಯಿತು. ಹಬ್ಬದ ಉತ್ಸವಗಳು ಜರುಗಿದಂಥ ಸಂದರ್ಭದಲ್ಲಿ ಅಮಾನುಷವಾದ ಒಂದು ಘಟನೆ ನಡೆದುಹೋಯಿತು. ಹಳ್ಳಿಗಳಲ್ಲಿ ಸಾಮಾನ್ಯವಾಗಿ ಹರಿಜನರು ಯಾವುದೇ ಹಬ್ಬ ನಡೆದರೂ 'ತಮಟೆ' ಬಡಿಯುವ ಪದ್ಧತಿ ರೂಢಿಯಲ್ಲಿದೆ. ಅದರಂತೆ ಗ್ರಾಮದ ಹರಿಜನರು ಹಬ್ಬದಲ್ಲಿ ತಮಟೆ ಬಡಿಯುತ್ತಿದ್ದರು. ಹಬ್ಬದ ಕೊನೆಯ ಹಂತದಲ್ಲಿ ಪೂಜಾರಿಯ ಮೈಮೇಲೆ ದೇವರು ಬರಬೇಕಾಗಿದ್ದುದು ಬಾಕಿ ಉಳಿದಿತ್ತು. ನೆರೆದಿದ್ದ ಜನಸ್ತೋಮ ತಮಟೆಯವರನ್ನು ಹುರಿದುಂಬಿಸಿತು. ತಮಟೆಯವರು ಇಡೀ ರಾತ್ರಿಯೆಲ್ಲಾ ಪೂಜೆ ಮೆರವಣಿಗೆ ಇದ್ದುದರಿಂದ ಬಡಿದು ಬಡಿದು ಸುಸ್ತಾಗಿದ್ದರು. ಆದರೂ ತಮಟೆಯವರು ಪ್ರಯತ್ನ ಮೀರಿ ಬಡಿಯುತ್ತಿದ್ದರು. ಕೊನೆಯಂಚಿಗೆ ಪೂಜಾರಿಯ ಮೈಮೇಲೆ ಅಮ್ಮ 'ಮೈದುಂಬಿ' ಕೊಂಡಳು. ಆತ "ದಗ್ಗಡದಗ್ಗಡನೆ ಕುಣಿಯಲು ಪ್ರಾರಂಭಿಸಿದ. ಕುಣಿತಕ್ಕೆ ತಕ್ಕಂತೆ ಬಡಿಯುವುದು ತಮಟೆಯವರಿಗೆ ಸಾಧ್ಯವಾಗಲಿಲ್ಲ. ಇದಕ್ಕೆ ಕೋಪಿಸಿಕೊಂಡ ಪೂಜಾರಿ ತಮಟೆ ಬಡಿಯುತಿದ್ದವರಲ್ಲೊಬ್ಬನಿಗೆ ತಾನು ಹಿಡಿದ ಬೆತ್ತದಿಂದ ಮುಖದಮೇಲೆ ಗುದ್ದಿದ. ಈ ಹೊಡೆತದಿಂದ ಹೊಡೆಯಿಸಿಕೊಂಡವನ ಬಲಗಣ್ಣು ಹೋಗಬೇಕಾಗಿತ್ತು. ಆದರೆ ಕಣ್ಣುಗುಡ್ಡೆಯಿಂದ ಸ್ವಲ್ಪ ಕೆಳಕ್ಕೆ ಏಟು ಬಿದ್ದಿರುವುದರಿಂದ ವ್ಯಕ್ತಿ ಅಪಾಯದಿಂದ ಪಾರಾಗಿದ್ದಾನೆ. ಈ ಘಟನೆಯಿಂದ ಕೆಲವು ಹರಿಜನ ಮುಂದಾಳುಗಳು ಉದ್ರಿಕ್ತರಾದರೂ, ಅವರು ಸವರ್ಣೀಯರ ಹಂಗಿನಲ್ಲಿ ಇದ್ದುದರಿಂದ ಯಾವುದೇ ಪ್ರತಿಭಟನೆ ಸೂಚಿಸದೆ ತೆಪ್ಪಗಾಗಿದ್ದಾರೆ.

ಹುಲ್ಲುಕೆರೆ ಮಹಾದೇವ

# ದಾಖಲೆಗಳು

## ಭೂ ವಿವಾದದಲ್ಲಿ ಹರಿಜನರಿಗೆ ಇರಿತ

ಕುಮಟಾ–ಮೇ 6—ಇಲ್ಲಿಯ ಒಂದು ಕೃಷಿ ಭೂಮಿಯ ಧಾರಣ ಹಕ್ಕಿನ ಸಂಬಂಧವಾಗಿ ಉದ್ಭವಿಸಿದ ತಂಟೆಯಲ್ಲಿ ಏಳು ಜನ ಕೋಟೆಕಾರ ಹರಿಜನರಿಗೆ ಇರಿತದ ಗಾಯಗಳಾಗಿವೆ. ಅವರಲ್ಲಿಯ ಮೂವರ ಸ್ಥಿತಿ ತೀರ ಗಂಭೀರವಾಗಿದ್ದು ಅವರನ್ನು ಚಿಕಿತ್ಸೆಗಾಗಿ ಹುಬ್ಬಳ್ಳಿಯ ಕೆ. ಎಂ. ಸಿ. ಆಸ್ಪತ್ರೆಗೆ ಸಾಗಿಸಲಾಗಿದೆ.

ಈ ಘಟನೆಯ ಸಂಬಂಧವಾಗಿ ಪೋಲೀಸರು ಕಾಯಾ ಕೃಷ್ಣಾ ನಾಯಕ್ ಜೆಟ್ಟಿ, ಕೃಷ್ಣಾ ನಾಯಕ್ ಮತ್ತು ಮಹದೇವ ತಿಮ್ಮಪ್ಪ ನಾಯಕ್ ಈ ಮೂವರನ್ನು ಬಂಧಿಸಿದ್ದಾರೆ.

ಈ ಭೂಮಿಯ ವಿವಾದವು ಕುಮಟಾ ಭೂನ್ಯಾಯ ಮಂಡಳಿಯಲ್ಲಿ ಹರಿಜನರ ಪರವಾಗಿ ಇತ್ಯರ್ಥವಾಗಿದ್ದಿತು. ಅದರಿಂದ ಕೆರಳಿದ ಆಪಾದಿತರು ಅವರ ಮೇಲೆ ಕೈ ಮಾಡಿದರೆಂದು ವರದಿಯಾಗಿದೆ.

(7–5–77 ಸಂಯುಕ್ತ ಕರ್ನಾಟಕ)

## ಹರಿಜನ ವ್ಯಕ್ತಿಯ ಕೊಲೆ?

ಬಿಜಾಪುರ ಮೇ 1– ಹರಿಜನ ವ್ಯಕ್ತಿಯೊಬ್ಬನನ್ನು ಎಂಟುಮಂದಿಯ ಗುಂಪು ಬಂದು ಕಳೆದ ಶುಕ್ರವಾರ ಕಲ್ಲಿನಿಂದ ಹೊಡೆದು ಕೊಲೆ ಮಾಡಿರುವುದಾಗಿ ಸಿಂಧಗಿ ತಾಲೂಕಿನ ಮದನ ಹಳ್ಳಿಯಿಂದ ವರದಿಯಾಗಿದೆ.

ಭಾಗವ್ವನ ಮಗ ಭೀಮಸ್ಯಾ ಕೊಲೆಗೆ ಈಡಾದ ವ್ಯಕ್ತಿ ಎಂದು ತಿಳಿದುಬಂದಿದೆ. ಹಳೆಯ ವೈಷಮ್ಯವೇ ಕೊಲೆಗೆ ಕಾರಣವೆಂದು ಹೇಳಲಾಗಿದೆ.

ಮದನಹಳ್ಳಿಯ ಗುರುಬಸಪ್ಪ ತಳ್ಳೂರ್ ಎಂಬುವರು ತಮ್ಮ ಹೊಲದಲ್ಲಿ ಭೀಮಸ್ಯಾನನ್ನು ಶುಕ್ರವಾರ ರಾತ್ರಿ ಸುಮಾರು 8-30ರ ಸಮಯದಲ್ಲಿ ಎಂಟುಮಂದಿ ಕಲ್ಲಿನಿಂದ ಹೊಡೆದು ಕೊಲೆ ಮಾಡಿದರೆಂದು ದೂರು ನೀಡಿರುವರೆಂದು ವರದಿಯಾಗಿದೆ.

(2–5–77 ಕನ್ನಡಪ್ರಭ)

# ಅಸ್ಪೃಶ್ಯತೆಯ ಪೀಕಲಾಟ

ಇಂಡಿಯಾದ ಶೇ. 99 ಊರುಗಳಲ್ಲಿ ಇರುವಂತೆ ಮಂಡ್ಯನಗರದ ಪಕ್ಕದಲ್ಲಿರುವ ಸೂನಗಳ್ಳಿಯ ಹೋಟೆಲ್‌ಗಳಿಗೂ ಹರಿಜನ-ಗಿರಿಜನರ ಪ್ರವೇಶ ನಿಷಿದ್ಧವಾಗಿದೆ. ಈ ಹೋಟೆಲ್‌ಗಳಲ್ಲಿ ಇವರಿಗೆಂದೇ ತೆಗೆದಿಟ್ಟ ಪ್ರತ್ಯೇಕ ಲೋಟಗಳು, ಜಾಗಗಳು ಇವೆ. ಒಮ್ಮೆ ಈ ಲೋಟಗಳಿಗೆ ಮತ್ತು ಹರಿಜನ-ಗಿರಿಜನರಿಗೆ ಸಂಬಂಧಿಸಿದಂತೆ ಹೋಟೆಲ್ ಮಾಲೀಕನನ್ನು ಪೀಕಲಾಟಕ್ಕೆ ಸಿಕ್ಕಿಸಿದ ಒಂದು ಘಟನೆ ನಡೆಯಿತು.

ಇದೇ ಸೂನಗಳ್ಳಿಯ ಮಿಡಲ್‌ಸ್ಕೂಲಿನ ಹರಿಜನರ ಹೆಡ್‌ಮ್ಯಾಸ್ಟರನ್ನು ನೋಡಲು ಅವರ ಹಳೆಯ ಶಿಷ್ಯ ಸ್ನೇಹಿತರಿಬ್ಬರು ಬಂದರು. ಇವರು ಬಂದದಕ್ಕೆ ಖುಷಿಯಾದ ಹೆಡ್‌ಮಾಸ್ಟರು ಮಾಮೂಲಿನಂತೆ ಸ್ಕೂಲಿನ ಒಬ್ಬ ವಿದ್ಯಾರ್ಥಿ ಕರೆದು ಹೋಟೆಲಿಂದ ಮೂರು ಕಾಫಿ ತರುವಂತೆ ಹೇಳಿದರು. ಅದೇ ಸಮಯಕ್ಕೆ ಸವರ್ಣೀಯ ಮೇಸ್ಟ್ರುಗಳೂ ಇದೇ ಹುಡುಗನಿಗೆ ಮೂರು ಕಾಫಿ ತರುವಂತೆ ಹೇಳಿದರು. ಕಾಫಿ ಕೇಳಲು ಬಂದ ಈ ಹುಡುಗನನ್ನು ಹೋಟೆಲ್ ಮಾಲೀಕ ಪ್ರಶ್ನಿಸಿದ: "ಯಾರ್‍ಗೊ ಕಾಫಿ" "ಹೆಡ್ ಮೇಸ್ಟ್ರಿಗೆ ಮೂರು, ಬೇರೆ ಮೇಸ್ಟ್ರಿಗೆ ಮೂರು" ಹುಡುಗ ಹೇಳಿದ. ಸರಿ ಹೆಡ್‌ಮಾಸ್ಟರ ಜಾತಿ ಚೆನ್ನಾಗಿ ಗೊತ್ತಿದ್ದ ಹೋಟೆಲ್ ಮಾಲೀಕ ಮೂರು ಹರಿಜನರ ಲೋಟ ಮತ್ತು ಮೂರು ಮೇಲ್ಜಾತಿ ಲೋಟಗಳಲ್ಲಿ ಕಾಫಿ ಕೊಟ್ಟು "ಹುಷಾರಾಗಿ ಇದ ಹೆಡ್ ಮಾಸ್ಟರಿಗೇ ಕೊಡು" ಎಂದು ಹರಿಜನ ಲೋಟಗಳನ್ನು ತೋರಿಸಿ ತಾಖೀತುಮಾಡಿದ. ಹುಡುಗ ಹ್ಞೂ ಅಂದುಕೊಂಡು ಬಂದದ್ದು ಮೇಸ್ಟ್ರುಗಳಿಗೆ ಕಾಫಿ ಕೊಡುವಾಗ ಮರೆತು ಹೋಗಿ ಎಲ್ಲಾ ಲೋಟಗಳೂ ಬೆರಸಿಕೊಂಡುಬಿಟ್ಟವು. ಕಾಫಿ ಕುಡಿದಾದ ಮೇಲೆ ಬೆರಸಿಕೊಂಡ ಖಾಲಿ ಲೋಟಗಳನ್ನು ತಂದು ಹುಡುಗ ಹೋಟೆಲ್‌ಮಾಲೀಕನ ಮುಂದೆ ಇಟ್ಟ. ಇದ ನೋಡಿದ ಮಾಲೀಕನಿಗೆ ಸಿಟ್ಟಿನ ಜೊತೆ ಪೀಕಲಾಟ ಆಗಿ "ಲೇ.. ಎಲ್ಲನೂ ಬೆರಸ್ಕಂದು ತಂದಿದ್ದಿಲಾ.... ಯಾರ್‍ಯಾರು ಕುಡುದ್ರು ? ಇದ್ರಲ್ಲಾರು ? ಅದ್ರಲ್ಲಾರು ?" ಎಂದು ಗದರಿಸಿದ. 'ಗೊತ್ತಿಲ್ಲ' ಎಂದು ಹುಡುಗ ಸ್ಕೂಲಿಗೆ ಓಡಿ ಹೋದ. ಆಗ ಮಾಲೀಕ ಅಲ್ಲೇ ಹೊರಗಡೆ ಕಾಫಿ ಕುಡಿಯುತ್ತಿದ್ದ ಒಬ್ಬ ಹರಿಜನ ಯುವಕನ ಹತ್ತಿರ ಬಂದು "ನೋಡ್ಲಾ ನಿಮ್ಮೋರೈದ ಕಾಫಿ ತರ್‍ಸಿ ಇಂಗ್ ಮಾಡವ್ನಲ್ಲಾ ಸರಿಲಾ ? ಥೂ...." ಎಂದು ಲೋಟ ತೋರಿಸಿ "ನೀನಾರೂ ನಸಿ ತೊಳ್ದು ಬುಡ್ಲಾ" ಎಂದ. ಇದಕ್ಕೆ ಹರಿಜನ ಯುವಕ ಸಮ್ಮತಿಸಲಿಲ್ಲ. ಕೊನೆಗೆ ಮಾಲೀಕ ಚನ್ನಾಗಿ ಬೈಯ್ಯುತ್ತಾ ಲೋಟಗಳಿಗೆ ಹೆಚ್ಚು ಮಣ್ಣು ಸೋಪು ಹಾಕಿ ತೊಳೆದು ಎಲ್ಲಾ ಲೋಟಗಳನ್ನು ಮೇಲ್ಜಾತಿ ಲೋಟಗಳನ್ನಾಗಿ ಮಾಡಿ ಇಟ್ಟುಕೊಂಡ.

—ಜವರಯ್ಯ, ಸೂನಗಹಳ್ಳಿ.

## ದಲಿತ ನುಡಿ

ನಿಮ್ಮ ಜೀವನದ ಒಳಿತು–ಕೆಡಕುಗಳು ನೀವು ಹುಟ್ಟುವ ಮುನ್ನವೇ ನಿರ್ಧಾರಿತವಾಗಿಬಿಟ್ಟಿವೆ ಎಂಬ ಮೂಢನಂಬಿಕೆಯನ್ನು ಕಿತ್ತೊಗೆಯಿರಿ. ನಿಮ್ಮ ಸುಖ–ದುಃಖ, ದಾರಿದ್ರ್ಯಗಳಿಗೆ ದೇವರು ಕಾರಣ ಅಲ್ಲವೇ ಅಲ್ಲ. ಅವುಗಳಿಂದ ಬಿಡುಗಡೆ ಇಲ್ಲ ಎಂಬ ನಿರಾಶೆ ಮಾತ್ರ ಬೇಡ. ಈ ತೆರನಾದ ಅನಂತ ಮೂಢನಂಬಿಕೆಗಳೇ ನೀವು ಶಾಶ್ವತ ಗುಲಾಮರಾಗಿರಲು ಕಾರಣ.

—ಅಂಬೇಡ್ಕರ್

# ದಿಢೀರ್ ವರ

ಮದುವೆ ದಿನ ಬಂದು, ಧಾರೆಯ ಸಮಯವೂ ಬಂತು. ವಾದ್ಯಗಳು ಮೊಳಗಿದವು. ಆದರೆ ವರನೇ ಬಂದಿರಲಿಲ್ಲ. ಅವನ ಬರುವಿಕೆಗೆ ಆತಂಕದಿಂದ ಕಾಯುತ್ತಿದ್ದ ವಧುವಿನ ಮನೆಯವರಿಗೆ ಎದೆ ಡವ ಡವ ಶುರುವಾಯಿತು. ಆದರೆ ಆ ಸಮಯಕ್ಕೆ ಸರಿಯಾಗಿ ಬಂದ ವರನನ್ನು ಕಂಡು "ಕೊನೆಗಾದರೂ ಬಂದನಲ್ಲಾ" ಎಂದು ಸಮಾಧಾನವಾದರೂ ಅವನ ಬಟ್ಟೆ ಬರೆ ಕಂಡು ವಿಚಿತ್ರ ಎನಿಸಿತು. ಹೆಣ್ಣು ನೋಡಲು ಟ್ರಿಮ್ಮಾಗಿ ಡ್ರೆಸ್ಸು ಮಾಡು ಆಕೆ ಬಂದಿದ್ದ ವರ ಈಗ ಎಂಥದೋ ಹರಿದ ಬಟ್ಟೆ ಹಾಕಿಕೊಂಡು ಸ್ನಾನವನ್ನೂ ಮಾಡದೇಯೆ ವಿಚಿತ್ರವಾಗಿ ಬಂದಿದ್ದ—ಆ ಬೆಂಗಳೂರು ವರ. ಅವನ ಜೊತೆಯಲ್ಲಿ ಬಂದಿದ್ದ ಬಂದಿಬ್ಬರನ್ನು ವಿಚಾರಿಸಲು ಅವರು ಮದುವೆಗೆ ಆಗತ್ಯವಾಗಿ ಬೇಕಾದ ಸಾಮಾನುಗಳನ್ನೂ ತಂದಿರಲಿಲ್ಲ. ಇದನ್ನು ಪ್ರಶ್ನಿಸಲಾಗಿ 'ಎಲ್ಲವನ್ನೂ ನೀವೆ ಹಾಕಿ ಮದುವೆ ಮಾಡಿ ಕೊಡಿ" ಎಂದರು. ಇದನ್ನು ಕೇಳಿದ ಬಡ ವಧುವಿನ ಮನೆಯವರಿಗೆ ದಿಗ್ಭ್ರಮೆಯಾಗಿ ವರನನ್ನು ತರಾಟೆಗೆ ತೆಗೆದುಕೊಂಡಾಗ "ಆಗಾದರೆ ಮದುವೆಯೇ ಬೇಡ" ಎಂದು ತಿರಸ್ಕರಿಸಿ ಹೊರಟು ಹೋದ. ಧಾರೆಗೆ ರೆಡಿಯಾದ ವಧು ಮತ್ತು ಹಸಿರು ಚಪ್ಪರ ಹಾಗೆ ನಿಂತಿದ್ದವು. ವಧುವಿನ ಮನೆಯವರ ದುಃಖ ಜೋರಾಗಿ ಅಳುವ ಮಟ್ಟಕ್ಕೆ ಹೋಯಿತು. ಆದರೆ ಅಷ್ಟರಲ್ಲಿ ಅದೇ ಗ್ರಾಮದ ವಿ. ಕೆ. ರಂಗಸ್ವಾಮಿ ಎಂಬ ಯುವಕ ಮದುವೆಯಾಗಲು ಮುಂದೆ ಬಂದಾಗ ಸಂತೋಷಗೊಂಡ ಮನೆಯವರು ಮತ್ತು ಊರಿನ ಜನರೆಲ್ಲರೂ ಸೇರಿ ಅದೇ ಸಮಯಕ್ಕೆ ಅದೇ ವಧುವಿನೊಡನೆ ಮದುವೆ ಮಾಡಿದರು.

—ಈ ಘಟನೆ ಟಿ. ನರಸೀಪುರ ತಾಲ್ಲೂಕು ವ್ಯಾಸರಾಜಪುರ ಗ್ರಾಮದ ಹರಿಜನ ಕಾಲೋನಿಯಲ್ಲಿ ತಾ: 25-4-1977 ರಂದು ನಡೆಯಿತು.

—ವೆಂಕಟಾಚಲಯ್ಯ

# ಚುನಾವಣೆ ನಂತರದ ಅಮಾನುಷ ಘಟನೆ

ಈ ವರ್ಷದ ಚುನಾವಣೆಯಲ್ಲಿ ದಕ್ಷಿಣರಾಜ್ಯಗಳ ಹರಿಜನ–ಗಿರಿಜನ ಮುಸ್ಲೀಮರು ಕಾಂಗ್ರೆಸ್ಸಿನ ಪೊಳ್ಳು ಘೋಷಣೆ ಮತ್ತು ರಕ್ಷಣೆಗಳನ್ನೇ ನಂಬಿ ಓಟುಕೊಟ್ಟದ್ದರಿಂದ ಕೆಲವು ರಾಜ್ಯಗಳಲ್ಲಿ ಕಾಂಗ್ರೆಸ್ಸು ಗೆದ್ದಿತು. ಆದರೆ ಕೇಂದ್ರದಲ್ಲಿ ಜನತಾ ಪಕ್ಷ ಅಧಿಕಾರಕ್ಕೆ ಬಂದಮೇಲೆ ಕಾಂಗ್ರೆಸ್ಸು ಮಾಡಿದ ಅಲ್ಪಸ್ವಲ್ಪ "ದಲಿತರ ಪರವಾದ ಕಾನೂನುಗಳೂ" ಹೊರಟು ಹೋದವು ಎಂದುಕೊಂಡ ಮೇಲ್ಜಾತಿ, ಮೇಲ್ವರ್ಗದ ಜನ ಹರಿಜನ–ಗಿರಿಜನ ಮುಸ್ಲೀಮರ ಮೇಲೆ ಅಮಾನುಷ ದೌರ್ಜನ್ಯಗಳನ್ನು ನಡೆಸತೊಡಗಿದ್ದಾರೆ. ಇದು ದಕ್ಷಿಣ ರಾಜ್ಯಗಳಲ್ಲಿ ಹೆಚ್ಚಾಗಿದ್ದು, ಕಳೆದ ಮಾರ್ಚಿ ತಿಂಗಳಲ್ಲಿ ಆಂಧ್ರಪ್ರದೇಶದ ನಂದ್ಯಾಲ್ ಜಿಲ್ಲೆಯ ಹಳ್ಳಿಗಳಲ್ಲಿ ಸವರ್ಣೀಯರು ಹರಿಜನರಮೇಲೆ ಇಂಥ ದೌರ್ಜನ್ಯ ನಡೆಸಿರುವುದನ್ನು ಅನೇಕ ಪತ್ರಿಕೆಗಳು ವರದಿ ಮಾಡಿವೆ. ಇತ್ತೀಚೆಗೆ ಆಂಗ್ಲ ನಿಯತಕಾಲಿಕೆ 'ಲಿಂಕ್' ತನ್ನ ವರದಿಗಾರರನ್ನು ದೌರ್ಜನ್ಯ ನಡೆದ ಸ್ಥಳಗಳಿಗೆ ಕಳುಹಿಸಿ ದೌರ್ಜನ್ಯದ ದೀರ್ಘ ವರದಿಯನ್ನು ಪ್ರಕಟಿಸಿದೆ. ಅದರ ಸಾರಾಂಶ ಇದು :

(ಕೊನೆ ಪುಟಕ್ಕೆ)

# ಕಣ್ಣು ತೆರೆಸುವ ಮೊದಲ ಕೆಲಸ





ಮೂವತ್ತು ವರ್ಷದ ಮಾತು. ಒಂದು ಹುಡುಗ, ಅಸ್ಪೃಶ್ಯರವನು, ಎಲ್. ಎಸ್. ಪರೀಕ್ಷೆ ಕಟ್ಟಲು ತಾಲ್ಲೂಕು ಕೇಂದ್ರಕ್ಕೆ ಬರುತ್ತಾನೆ. ತಾಯಿ ಕೊಟ್ಟು ಕಳುಹಿಸಿದ್ದ ಎಂಟಾಣೆ ಹಿಡಿದು ಪರೀಕ್ಷೆ ಕಟ್ಟಲು ಬಂದಿದ್ದಾನೆ ಹುಡುಗ. ಅದೇ ಊರಿನ ಒಂದು ಹಾಸ್ಟಲಿನಲ್ಲಿ ಬಿಟ್ಟಿ ಊಟದ ವ್ಯವಸ್ಥೆ ಇದ್ದುದು ಆಗ ಎಲ್ಲ ಕಡೆಗೂ ತಿಳಿದಿದ್ದರಿಂದ ಈ ನಮ್ಮ ಹುಡುಗನೂ ಬರುವಾಗಲೇ ಒಂದು ಸಿಲ್ವರ್ ಊಟದ ತಟ್ಟೆಯನ್ನೂ ಕಂಕುಳಲ್ಲಿ ಸಿಕ್ಕಿಸಿಕೊಂಡು ಬಂದಿದ್ದಾನೆ. ಆದರೆ ನೀರು ಕುಡಿಯಲು ಲೋಟ ಇಲ್ಲ. ಏನ ಮಾಡುತ್ತಾನೆ? ಒಂದಾಣೆ ಕರ್ಚುಮಾಡಿ ನೀರು ಕುಡಿಯಲು ತಕ್ಕುದಾದ ಒಂದು ಮಣ್ಣಿನ ಸಣ್ಣ ಮಡಿಕೆ ಕೊಂಡು ಅದ ಕೈಲಿಡಿದು ಸಿಲ್ವರ್ ತಟ್ಟೆಯ ಕಂಕುಳಲ್ಲಿರಿಕಿ ಹಾಸ್ಟಲಿಗೆ ಊಟಕ್ಕೆ ಹಾಜರಾಗುತ್ತಾನೆ.

ಆ ಹಾಸ್ಟಲಿನಲ್ಲಿ ಮೇಲು ಜಾತಿಯವರಿಗೆಲ್ಲ ಒಳಗೆ ಊಟ, ಕೀಳು ಜಾತಿಯವರಿಗೆಲ್ಲ ದೂರದಲ್ಲಿ ಹೊರಗೆ ಊಟ ಮಾಮೂಲಿಯಾಗಿ. ಈ ಹುಡುಗನೂ ಫುಲ್‌ಮೀಲ್ಸ್ ಸಿಗುತ್ತದೆಂಬ ಸಂತಸದಿಂದ ಎಂಜಲೆಲೆ ಇಡುವ ಪಕ್ಕದ ಸಾಲಿನಲ್ಲಿಗಾಳಿಯಲ್ಲಿ ತೇಲಾಡುತ್ತಿದ್ದ ಯಾವವಾಸನೆಗೂ ಜಗ್ಗದೆ ಊಟಕ್ಕೆ ಕೂರುತ್ತಾನೆ. ಅಲ್ಲಿ ಆ ಅಸ್ಪೃಶ್ಯ ಮಕ್ಕಳ ಊಟದ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದಾತ ಎಸ್ಸೆಲ್ಸಿ ಫೇಲಾದ, ಊಟಕ್ಕೆ ಗತಿಯಿಲ್ಲದ ಆ ಹಾಸ್ಟಲಿನ ಹೊರಗೆ ಸೇರಿಕೊಂಡಿದ್ದಾತ, ಅಸ್ಪೃಶ್ಯರವನು. ಆತ ಯಾಕೊ ಈ ನಮ್ಮ ಹುಡುಗನನ್ನು ಊಟ ಮಾಡುತ್ತಿದ್ದವನನ್ನು ದುರದುರು ನೋಡುತ್ತಿರುತ್ತಾನೆ. ಈ ಹುಡುಗ ಅದನ್ನು ಗಮನಿಸಿದರೂ ಕಸಿವಿಸಿಯಾದರೂ ಅವನು ಮಾಡುತ್ತಿದ್ದುದು ಊಟವಾದ ಪ್ರಯುಕ್ತ ಅವಾವುದನ್ನು ಲಕ್ಷಿಸದೆ ಊಟ ಮುಗಿಸಿ ಮೇಲೇಳುತ್ತಾನೆ. ಮೇಲ್ವಿಚಾರಕ ಇವನನ್ನು 'ಬಾರೊ ಇಲ್ಲಿ' ಎಂದು ಕರೆಯುತ್ತಾನೆ. ಈ ಹುಡುಗ ತನ್ನ ಸಿಲ್ವರ್ ತಟ್ಟೆಯನ್ನು ಕಂಕುಳಲ್ಲಿರಿಕಿ ಕೈಯಲ್ಲಿ ಆ ಮಣ್ಣಿನ ಮಡಿಕೆ ಹಿಡಿದು ಹಾಜರಾಗುತ್ತಾನೆ. ಮೇಲ್ವಿಚಾರಕ ಕೇಳುತ್ತಾನೆ—'ನೀವು ಬಾಳ ಬಡವರೇನೊ?'. ಅದಕ್ಕೆ ಈ ಹುಡುಗ ಅಂತದೆ 'ಹೌದು ಸಾ'. ಅದಕ್ಕೆ ಮೇಲ್ವಿಚಾರಕ 'ಸರಿ, ಚೆನ್ನಾಗಿ ಓದು, ನಾಳೆಯಿಂದ ಈ ಮಣ್ಣಿನ ಮಡ್ಕೆ ತರಬೇಡಕಣೊ. ಹೊಲೆಮಾದಿಗರಿಗೆ ಮಣ್ಣಿನ ಮಡ್ಕೆ ಲಾಯಕ್ಕು ಅಂತ ಬೇರೆವರು ಅಂತಾರೆ' ಅಂದನು, ಈ ಹುಡುಗ ಮಿಕ ಮಿಕ ನೋಡಿ ಒಳಗೊಳಗೆ 'ನಾ ತಂದರೆ ಇವನಿಗೇನು' ಅಂದುಕೊಂಡು ನಾಳೆ ಪರೀಕ್ಷೆಗೆ ಓದಲು ನಡೆದನು. ಆರಾಣೆ ಕೊಟ್ಟು ಸಿಲ್ವರ್ ಲೋಟ ಕೊಂಡರೆ ಇರೊ ದುಡ್ಡೆಲ್ಲ ಫೈಸಲ್ ಆಗಿಬಿಡುತ್ತಿತ್ತು. ಮೂರನೆ ದಿನವೂ ಈ ಹುಡುಗ ಮತ್ತೆ ಅದೇ ಮಣ್ಣಿನ ಮಡಿಕೆ ಹಿಡಿದು ಊಟಕ್ಕೆ ಬಂದಾಗ ಮೇಲ್ವಿಚಾರಕ ಆ ಮಣ್ಣಿನ ಮಡಿಕೆಯನ್ನು ಕಿತ್ತು ಎಸೆದು ಬಿಡುತ್ತಾನೆ. ಈ ನಮ್ಮ ಹುಡುಗ ಚೂರಾಗುತ್ತಿದ್ದ ಮಣ್ಣಿನ ಮಡಿಕೆಯನ್ನೆ ನೋಡುತ್ತ ಕಣ್ಣಲ್ಲಿ ನೀರು ತುಂಬಿಕೊಂಡು ನಿಲ್ಲುತ್ತಾನೆ.

○ ○ ○ ○

ಆಗ ಎಲ್. ಎಸ್. ಪರೀಕ್ಷೆ ಕಟ್ಟಲು ಹೋಗಿದ್ದವರು ದಾವಣಗೆರೆ ಡಾ|| ತಿಪ್ಪೆಸ್ವಾಮಿಯವರು. ತನ್ನ ಮಣ್ಣಿನ ಮಡಿಕೆಯನ್ನು ಯಾಕೆ ಮೇಲ್ವಿಚಾರಕ ಕಿತ್ತು ಎಸೆದ ಎಂಬುದು ಬಾಳ ದಿನಗಳವರೆಗೂ ತಮಗೆ ಅರ್ಥವಾಗಲಿಲ್ಲ ಎಂದು ಡಾ. ತಿಪ್ಪೆಸ್ವಾಮಿ ಹೇಳಿದರು. ಜಾತಿ ಪದ್ಧತಿಗೆ ಮೇಲು ಕೀಳುಗೆ ಕುದಿಯುತ್ತಿದ್ದ ಆತ ಮಡಿಕೆ ಚೂರು ಮಾಡುವ ಮೂಲಕ ಅದ ವ್ಯಕ್ತ ಪಡಿಸಿದ ಅಂದರು. ಅಂಥ ಕುದಿತವನ್ನು ನಮ್ಮ ಜನರಲ್ಲಿ ಮೊದಲು ಉಂಟುಮಾಡಬೇಕು ಎಂದು ಡಾ. ತಿಪ್ಪೆಸ್ವಾಮಿ ನುಡಿದಾಗ, ನಾನು ಹೌದು ಅಂದೆ.

—ಕಿಡಿಗೇಡಿ.

---

### ....ಅಮಾನುಷ ಘಟನೆ

ನಂದ್ಯಾಲ್ ಜಿಲ್ಲೆಯ ಆಲ್ಲಘಡ ತಾಲ್ಲೂಕಿನ ಎಲ್ಲೂರ ಗ್ರಾಮದಲ್ಲಿ ಸವರ್ಣೀಯ ಜಮೀನ್ದಾರರು ಬಡ ಹರಿಜನರ ಎರಡು ಗುಡಿಸಲುಗಳಿಗೆ ಬೆಂಕಿ ಹಾಕಲಾಗಿದ್ದು ದಾಲುವಲಸಣ್ಣ ಎಂಬಾತನ ಹತ್ತು ವರ್ಷದ ಪ್ರಭಾವತಿ ಎಂಬ ಮಗಳು ಬೆಂಕಿಗೆ ಸಿಕ್ಕಿ ಸಜೀವ ದಹನವಾಗಿದ್ದಾಳೆ. ಸವರ್ಣೀಯರ ಈ ಭೀಕರ ದೌರ್ಜನ್ಯಕ್ಕೆ ಬಲಿಯಾದ ಅಸಹಾಯಕ ಕುಟುಂಬಗಳು ವಸತಿ ಕಳೆದುಕೊಂಡು ಈಗ ನಿರ್ಗತಿಕರಾಗಿದ್ದಾರೆ.

ಇದೇ ಆಲ್ಲಿಘಡ ತಾಲ್ಲೂಕಿನ ಗೋವಿಂದಪಳ್ಳಿಯಲ್ಲಿ ಮಾರ್ಚಿ 18 ರಂದು ಸವರ್ಣೀಯ ಜಮೀನುದಾರರು ಹರಿಜನ ಮತ್ತು ಕ್ರಿಶ್ಚಿಯನ್ (ಮೊದಲು ಹರಿಜನರಾಗಿದ್ದವರು) ರ ಮನೆಗಳಮೇಲೆ ಹಲ್ಲೆ ನಡೆಸಿ ಸಿಕ್ಕಾಬಟ್ಟೆ ಹೊಡೆದಿದ್ದಾರೆ. ಅನೇಕ ಬಡ ಹರಿಜನರು ಗಾಯಗೊಂಡು ಆರುಜನರು ಆಸ್ಪತ್ರೆಯನ್ನು ಸೇರಿದ್ದಾರೆ. ಇವರಲ್ಲಿ ಮೂವರು ಮಂದಿ ಈಗ ಆಸ್ಪತ್ರೆಯಿಂದ ಬಿಡುಗಡೆ ಹೊಂದಿದ್ದು, ತಮ್ಮ ಸ್ವಗ್ರಾಮಕ್ಕೆ ಮರಳಲು ಭಯಬೀತಿಗೊಂಡಿದ್ದಾರೆ. ಚುನಾವಣೆಯಲ್ಲಿ ಕಾಂಗ್ರೆಸ್ಸಿನ ಪರ ಕೆಲಸ ಮಾಡಿದ ಶ್ರೀ ಓಬಣ್ಣ ಮತ್ತು ಸಿಕ್ಕಮಣಿ ಎಂಬುವರಿಗೆ ಬಲವಾದ ಹೊಡೆತಗಳು ಬಿದ್ದಿದ್ದು ಅವರ ಕೈಗಳು ಮುರಿದಿವೆ.

### ....ಭೀಕರ ಕೊಲೆ

ಈಗಾಗಲೇ ಪೋಲೀಸ್ ಅಧಿಕಾರಿಗಳು ತನಿಖೆ ನಡೆಸಿ ಪೋಲೀಸ್ ನಾಯಿಗಳನ್ನು ಬಿಟ್ಟು ಅಪರಾಧಿಗಳನ್ನು ಹಿಡಿದಿದ್ದಾರಂದೂ, ಸಿಕ್ಕಿರುವ ಅಪರಾಧಿಗಳು ಆ ದಿನ ಲಾರಿ ತಡೆದು ಹೊಡೆದಿದ್ದ ಹಣವುಳ್ಳ ಸವರ್ಣೀಯರೇ ಆಗಿದ್ದು ಅವರ ಮುಖಂಡರಂತಿರುವ ಪುಟ್ಟರಾಜು ಮತ್ತು ಆವನ ಸೋದರ ಸಂಬಂಧಿ ಇಬ್ಬರನ್ನೂ ಪೋಲೀಸರ ಕೈಗೆ ಸಿಕ್ಕ ಎರಡು ದಿನಗಳಲ್ಲೇ ಜಾಮೀನಿನ ಮೇಲೆ ಬಿಟ್ಟಿದ್ದಾರೆಂಬ ಸುದ್ದಿಯೂ ಇದೆ. ದಿನಾ ಇಂಥ ಸಾವಿರ ಕೊಲೆಗಳನ್ನು ಮಾಡಿ ಹಣದ ಬಲದಿಂದ ಮುಚ್ಚಿಹಾಕುತ್ತಿರುವ ಘಟನೆಗಳನ್ನು ಕಂಡು ಕೇಳಿ ಅರಿತ ಅಲ್ಲಿನ ಸುತ್ತ ಮುತ್ತಲ ಬಡ ಹರಿಜನರು ಈಗ ಈ ಕೊಲೆಯ ಕತೆ ಏನಾಗುವುದೋ ಏನೋ ಎಂದುಪೋಲೀಸರ ಕಡೆಗೂ, ಕೋರ್ಟಿನ ಕಡೆಗೂ ಭೀತಿಯಿಂದ ಕಣ್ಣು ನೆಟ್ಟು ಕೂತಿದ್ದಾರೆ.

---

ಸಂಪಾದಕ : ರಾಮದೇವ ರಾಕೆ, ಜೊತೆಗೆ : ಶಿವಾಜಿಗಣೇಶನ್, ಶಿವಮಲ್ಲ ದೇವನೂರು.

ಪ್ರಕಾಶಕ: ಹೆಚ್. ಗೋವಿಂದಯ್ಯ

ವಿಳಾಸ : 2649/2, ಕೆ. ಜಿ. ಕೊಪ್ಪಲ್, ಮೈಸೂರು-. ಮುದ್ರಣ: ಆಂದೋಲನ ಮುದ್ರಣ, ಮೈಸೂರು-9.